॥ ಶ್ರೀಮೂಕಾಂಬಿಕಾಯೈ ನಮಃ ॥

# ಶ್ರೀರಾಜರಾಜೇಶ್ವರೀಮಂತ್ರಸ್ತವರಾಜಃ

ಕಲ್ಯಾಣಾಯುತಪೂರ್ಣಚಂದ್ರವದನಾಂ ಪ್ರಾಣೇಶ್ವರಾನಂದಿನೀಂ
ಪೂರ್ಣಾಪೂರ್ಣತರಾಂ ಪರೇಶಮಹಿಷೀಂ ಪೂರ್ಣಾಮೃತಾಸ್ವಾದಿನೀಮ್ ।
ಸಂಪೂರ್ಣಾಂ ಪರಮೋತ್ತಮಾಮೃತಕಲಾಂ ವಿದ್ಯಾವತೀಂ ಭಾರತೀಂ
ಶ್ರೀಚಕ್ರಪ್ರಿಯಬಿಂದುತರ್ಪಣಪರಾಂ ಶ್ರೀರಾಜರಾಜೇಶ್ವರೀಮ್ ॥ ೧ ॥

ಏಕಾರಾದಿಸಮಸ್ತವರ್ಣವಿವಿಧಾಕಾರ್ಯೈಕಚಿದ್ರೂಪಿಣೀಂ
ಚೈತನ್ಯಾತ್ಮಕಚಕ್ರರಾಜನಿಲಯಾಂ ಚಂದ್ರಾಂತಸಂಚಾರಿಣೀಮ್ ।
ಭಾವಾಭಾವವಿಭಾವಿನೀಂ ಭವಪರಾಂ ಸದ್ಭಕ್ತಿಚಿಂತಾಮಣೀಂ
ಶ್ರೀಚಕ್ರಪ್ರಿಯ................ ॥ ೨ ॥

ಈಹಾಧಿಕ್ ಪರಯೋಗಿವೃಂದವಿದಿತಾಂ ಸ್ವಾನಂದಭೂತಾಂ ಪರಾಂ
ಪಶ್ಯಂತೀಂ ತನುಮಧ್ಯಮಾಂ ವಿಲಸಿನೀಂ ಶ್ರೀವೈಖರೀರೂಪಿಣೀಮ್ ।
ಆತ್ಮಾನಾತ್ಮವಿಚಾರಿಣೀಂ ವಿವರಗಾಂ ವಿದ್ಯಾಂ ತ್ರಿಬೀಜಾತ್ಮಿಕಾಂ
ಶ್ರೀಚಕ್ರಪ್ರಿಯ................ ॥ ೩ ॥

ಲಕ್ಷ್ಮ್ಯಲಕ್ಷ್ಮ್ಯಸಿರೀಕ್ಷಣಾಂ ನಿರುಪಮಾಂ ರುದ್ರಾಕ್ಷಮಾಲಾಧರಾಂ
ತ್ರ್ಯಕ್ಷಾರ್ಧಾಕೃತಿದಕ್ಷವಂಶಕಲಿಕಾಂ ದೀರ್ಘಾಕ್ಷಿದೀರ್ಘಸ್ವರಾಮ್ ।
ಭದ್ರಾಂ ಭದ್ರವರಪ್ರದಾಂ ಭಗವತೀಂ ಭದ್ರೇಶ್ವರೀಂ ಮುದ್ರಿಣೀಂ
ಶ್ರೀಚಕ್ರಪ್ರಿಯ................ ॥ ೪ ॥

ಹ್ರೀಂಬೀಜಾಗತನಾದಬಿಂದುಭರಿತಾಮೋಂಕಾರನಾದಾತ್ಮಿಕಾಂ
ಬ್ರಹ್ಮಾನಂದಘನೋದರೀಂ ಗುಣವತೀಂ ಜ್ಞಾನೇಶ್ವರೀಂ ಜ್ಞಾನದಾಮ್ ।
ಇಚ್ಛಾಜ್ಞಾಕೃತಿನೀಂ ಮಹೀಂ ಗತವತೀಂ ಗಂಧರ್ವಸಂಸೇವಿತಾಂ
ಶ್ರೀಚಕ್ರಪ್ರಿಯ................ ॥ ೫ ॥

ಹರ್ಷೋನ್ಮತ್ತಸುವರ್ಣಪಾತ್ರಭರಿತಾಂ ಪೀನೋನ್ನತಾಂ ಘೂರ್ಣಿತಾಂ
ಹುಂಕಾರಪ್ರಿಯಶಬ್ದಜಾಲನಿರತಾಂ ಸಾರಸ್ವತೋಲ್ಲಾಸಿನೀಮ್ ।
ಸಾರಾಸಾರವಿಚಾರಚಾರುಚತುರಾಂ ವರ್ಣಾಶ್ರಮಾಕಾರಿಣೀಂ
ಶ್ರೀಚಕ್ರಪ್ರಿಯ................ ॥ ೬ ॥

ಸರ್ವೇಶಾಂಗವಿಹಾರಿಣೀಂ ಸಕರುಣಾಂ ಸನ್ನಾದಿನೀಂ ನಾದಿನೀಂ
ಸಂಯೋಗಪ್ರಿಯರೂಪಿಣೀಂ ಪ್ರಿಯವತೀಂ ಪ್ರೀತಾಂ ಪ್ರತಾಪೋನ್ನತಾಮ್ ।
ಸರ್ವಾಂತರ್ಗತಶಾಲಿನೀಂ ಶಿವತನೂಸಂದೀಪಿನೀಂ ದೀಪಿನೀಂ .
ಶ್ರೀಚಕ್ರಪ್ರಿಯ............... ॥ ೭ ॥

ಕರ್ಮಾಕರ್ಮವಿವರ್ಜಿತಾಂ ಕುಲವತೀಂ ಕರ್ಮಪ್ರದಾಂ ಕೌಲಿನೀಂ
ಕಾರುಣ್ಯಾಂಬುಧಿಸರ್ವಕಾಮನಿರತಾಂ ಸಿಂಧುಪ್ರಿಯೋಲ್ಲಾಸಿನೀಮ್ ।
ಪಂಚಬ್ರಹ್ಮಸನಾತನಾಸನಗತಾಂ ಗೇಯಾಂ ಸುಯೋಗಾನ್ವಿತಾಂ
ಶ್ರೀಚಕ್ರಪ್ರಿಯ............... ॥ ೮ ॥

ಹಸ್ತ್ಯುತ್ಕುಂಭನಿಭಸ್ತನದ್ವಿತಯತಃ ಪೀನೋನ್ನತಾದಾನತಾಂ
ಹಾರಾದ್ಯಾಭರಣಾಂ ಸುರೇಂದ್ರವಿನುತಾಂ ಶೃಂಗಾರಪೀಠಾಲಯಾಮ್ ।
ಯೋನ್ಯಾಕಾರಕಯೋನಿಮುದ್ರಿತಕರಾಂ ನಿತ್ಯಾಂ ನವಾರ್ಣಾತ್ಮಿಕಾಂ
ಶ್ರೀಚಕ್ರಪ್ರಿಯ........ ....... ॥ ೯ ॥

ಲಕ್ಷ್ಮೀಲಕ್ಷಣಪೂರ್ಣಭಕ್ತವರದಾಂ ಲೀಲಾವಿನೋದಸ್ಥಿತಾಂ
ಲಾಕ್ಷಾರಂಜಿತಪಾದಪದ್ಮಯುಗಲಾಂ ಬ್ರಹ್ಮೇಂದ್ರಸಂಸೇವಿತಾಮ್ ।
ಲೋಕಾಲೋಕಿತಲೋಕಕಾಮಜನನೀಂ ಲೋಕಾಶ್ರಯಾಂಕಸ್ಥಿತಾಂ
ಶ್ರೀಚಕ್ರಪ್ರಿಯ............... ॥ ೧೦ ॥

ಹ್ರೀಂಕಾರಾಶ್ರಿತಶಂಕರಪ್ರಿಯತನುಂ ಶ್ರೀಯೋಗಪೀಠೇಶ್ವರೀಂ
ಮಾಂಗಲ್ಯಾಯುತಪಂಕಜಾಭನಯನಾಂ ಮಾಂಗಲ್ಯಸಿದ್ಧಿಪ್ರದಾಮ್ ।
ಕಾರುಣ್ಯೇನ ವಿಶೇಷಿತಾಂಗಸುಮಹಾಲಾವಣ್ಯಸಂಶೋಭಿತಾಂ
ಶ್ರೀಚಕ್ರಪ್ರಿಯ............... ॥ ೧೧ ॥

ಸರ್ವಜ್ಞಾನಕಲಾವತೀಂ ಸಕರುಣಾಂ ಸರ್ವೇಶ್ವರೀಂ ಸರ್ವಗಾಂ
ಸತ್ಯಾಂ ಸರ್ವಮಯೀಂ ಸಹಸ್ರದಲಜಾಂ ಸತ್ತ್ವಾರ್ಣವೋಪಸ್ಥಿತಾಮ್ ।
ಸಂಗಾಸಂಗವಿವರ್ಜಿತಾಂ ಸುಖಕರೀಂ ಬಾಲಾರ್ಕಕೋಟಿಪ್ರಭಾಂ
ಶ್ರೀಚಕ್ರಪ್ರಿಯ............... ॥ ೧೨ ॥

ಕಾದಿಕ್ಷಾಂತಸುವರ್ಣಬಿಂದುಸುತನುಂ ಸರ್ವಾಂಗಸಂಶೋಭಿತಾಂ
ನಾನಾವರ್ಣವಿಚಿತ್ರಚಿತ್ರಚರಿತಾಂ ಚಾತುರ್ಯಚಿಂತಾಮಣಿಮ್ ।
ಚಿತ್ರಾನಂದವಿಧಾಯಿನೀಂ ಸುಚಪಲಾಂ ಕೂಟತ್ರಯಾಕಾರಿಣೀಂ
ಶ್ರೀಚಕ್ರಪ್ರಿಯ............... ॥ ೧೩ ॥

ಲಕ್ಷ್ಮೀಶಾನವಿಧೀಂದ್ರಚಂದ್ರಮುಕುಟಾದ್ಯಷ್ಟಾಂಗಪೀಠಾಶ್ರಿತಾಂ
ಸೂರ್ಯೇಂದ್ವಗ್ನಿಮಯೈಕಪೀಠನಿಲಯಾಂ ತ್ರಿಸ್ಥಾಂ ತ್ರಿಕೋಣೇಶ್ವರೀಮ್ ।
ಗೋಪ್ತ್ರೀಂ ಗರ್ವನಿಗರ್ವಿತಾಂ ಗಗನಗಾಂ ಗಂಗಾಗಣೇಶಪ್ರಿಯಾಂ
ಶ್ರೀಚಕ್ರಪ್ರಿಯ................ ॥ ೧೪ ॥

ಹ್ರೀಂಕೂಟತ್ರಯರೂಪಿಣೀಂ ಸಮಯಿನೀಂ ಸಂಸಾರಿಣೀಂ ಹಂಸಿನೀಂ
ವಾಮಾಚಾರಪರಾಯಣೀಂ ಸುಕುಲಜಾಂ ಬೀಜಾವತೀಂ ಮುದ್ರಿಣೀಮ್ ।
ಕಾಮಾಕ್ಷೀಂ ಕರುಣಾರ್ದ್ರಚಿತ್ತಸಹಿತಾಂ ಶ್ರೀಂ ಶ್ರೀತ್ರಿಮೂರ್ತ್ಯಂಬಿಕಾಂ
ಶ್ರೀಚಕ್ರಪ್ರಿಯ................ ॥ ೧೫ ॥

ಯಾ ವಿದ್ಯಾ ಶಿವಕೇಶವಾದಿಜನನೀ ಯಾ ವೈ ಜಗನ್ಮೋಹಿನೀ
ಯಾ ಬ್ರಹ್ಮಾದಿಪಿಪೀಲಿಕಾಂತಜಗದಾನಂದೈಕಸಂದಾಯಿನೀ ।
ಯಾ ಪಂಚಪ್ರಣವದ್ವಿರೇಫನಲಿನೀ ಯಾ ಚಿತ್ಕಲಾಮಾಲಿನೀ
ಸಾ ಪಾಯಾತ್ಪರದೇವತಾ ಭಗವತೀ ಶ್ರೀರಾಜರಾಜೇಶ್ವರೀ ॥ ೧೬ ॥

ಇತಿ ಶ್ರೀರಾಜರಾಜೇಶ್ವರೀಮಂತ್ರಸ್ತವರಾಜಃ ಸಂಪೂರ್ಣಃ

॥ ಶ್ರೀಮೂಕಾಂಬಿಕಾರ್ಪಣಮಸ್ತು ॥

---

# ಶ್ರೀಮೂಕಾಂಬಿಕಾ





ಮಹಾಲಕ್ಷ್ಮೀಃ ಕೋಲಾಪುರವರನಿವಾಸಾ ವಿಜಯತೇ-
ತರಾಂ ಶಾಂತಾ ಶಂಖಾರ್ಯಭಯವರಹಸ್ತಾ ತ್ರಿನಯನಾ ।
ಪರಾ ಮೂಕಾಂಬಾಖ್ಯಾ ಮಹಿಷಮಥನೋತ್ಕಂಠನಿಖಿಲಾ-
ಮರಾಸ್ಯೋತ್ಥಜ್ಯೋತಿರ್ಮಯಮಿಥುನಲಿಂಗಾಗ್ರಿಯವಪುಃ ॥

ಶ್ರೀಃ

॥ ಶ್ರೀಮಹಾಲಕ್ಷ್ಮ್ಯೈ ನಮಃ ॥

ಶ್ರೀಸ್ಕಾಂದಪುರಾಣಾಂತರ್ಗತಂ

# ಶ್ರೀಕೋಲಾಪುರಕ್ಷೇತ್ರಮಾಹಾತ್ಮ್ಯಮ್

## [ಶ್ರೀಮೂಕಾಂಬಿಕಾಪುರಾಣಮ್]

---

## ಅಥ ಪ್ರಥಮೋಽಧ್ಯಾಯಃ

**ಅಸ್ತು ವಃ ಶ್ರೇಯಸೇ ಕಿಂಚಿದ್ವಸ್ತುವಾಮಂ ಮಹೇಶಿತುಃ ।
ನಿಸ್ತುಲಂ ವಿಸ್ತೃತಂ ಚಾಸ್ತಿ ಪ್ರಸ್ತುತಂ ಭುವನಂ ಯತಃ ॥ ೧ ॥
ಕದಾಚಿನ್ನೈಮಿಷಾರಣ್ಯೇ ಋಷಯಃ ಶೌನಕಾದಯಃ । ಪಪ್ರಚ್ಛು-
ರ್ವಿನಯೇನೇದಂ ಸೂತಂ ಪೌರಾಣಿಕೋತ್ತಮಮ್ ॥ ೨ ॥ ಋಷಯ
ಊಚುಃ ॥ ಸೂತ ಸರ್ವಜ್ಞ ಗೋಕರ್ಣಕ್ಷೇತ್ರಮಾಹಾತ್ಮ್ಯಮುತ್ತ-
ಮಮ್ । ಶ್ರುತಂ ಕೋಲಾಪುರಕ್ಷೇತ್ರಮಾಹಾತ್ಮ್ಯಂ ವದ ಸಾಂಪ್ರ-**

---

ಶ್ರೀಮತ್ಕೋಲಾಪುರಕ್ಷೇತ್ರಮಾಹಾತ್ಮ್ಯಸ್ಯ ಯಥಾಮತಿ ।
ದೇವೀದಾಸೇನ ಕರ್ಣಾಟಭಾಷಾತಾತ್ಪರ್ಯಮುಚ್ಯತೇ ॥

ಶ್ರೀವೇದವ್ಯಾಸಮಹಾಮುನಿಯು ತಾನು ರಚಿಸಿದ ಕೋಲಾಪುರಕ್ಷೇತ್ರ ಮಾಹಾತ್ಮ್ಯವೆಂಬೀ ಗ್ರಂಥವು ನಿರ್ವಿಘ್ನದಿಂದ ಪರಿಸಮಾಪ್ತಿ ಹೊಂದಲೋಸ್ಕರ ನಿಖಿಲಬ್ರಹ್ಮಾಂಡನಾಯಕಿಯಾದ ಶ್ರೀಮದಾದಿಮಹಾಲಕ್ಷ್ಮಿಯು ಇದನ್ನು ಓದುವವರಿಗೂ, ಕೇಳುವವರಿಗೂ, ಶಾಶ್ವತವಾದ ಸುಖವನ್ನೀಯಲಿ ಎಂಬೀ ಆಶೀರ್ವಾದರೂಪವಾದ ಮಂಗಲವನ್ನಾಚರಿಸಿರುವನು. ಎಲೈ ಜನರುಗಳಿರಾ! ಯಾವುದರ ದೆಸೆಯಿಂದ ಈ ಪ್ರಸಿದ್ಧವಾದ ಜಗತ್ತು ತನಗೆ ಸಮಾನವಾದ್ದು ಬೇರೊಂದಿಲ್ಲದಿರುವುದಾಗಿಯೂ, ವಿಸ್ತಾರವಾಗಿಯೂ, ಇರುವುದೋ ಮಹೇಶನ ವಾಮಾರ್ಧದೇಹರೂಪವಾದ ಒಂದಾನೊಂದು ವಸ್ತುವು, ನಿಮ್ಮ ಶ್ರೇಯಸ್ಸಿಗೋಸ್ಕರ ಆಗಲಿ ॥ ೧ ॥ ಒಂದಾನೊಂದು ಕಾಲದಲ್ಲಿ ನೈಮಿಷಾರಣ್ಯದಲ್ಲಿ ಶೌನಕಾದಿ ಋಷಿಗಳು ಪೌರಾಣಿಕರಲ್ಲಿ ಶ್ರೇಷ್ಠನಾದ ಸೂತಮುನಿಯನ್ನು ಕುರಿತು ವಿನಯದಿಂದ ಇದನ್ನು ಕೇಳಿದರು ॥ ೨ ॥ ಎಲೈ ಸರ್ವಜ್ಞನಾದ ಸೂತನೆ! ಉತ್ತಮವಾದ ಗೋಕರ್ಣಕ್ಷೇತ್ರದ ಮಾಹಾತ್ಮ್ಯವು ಕೇಳ

**ತಮ್ ‖ ೩ ‖ ಸೂತ ಉವಾಚ ‖ ಭೋ ಭೋ ದ್ವಿಜವರಾಃ ಸರ್ವೇ ಸರ್ವಾರ್ಥದಮನುತ್ತಮಮ್ । ಯತ್ಪೃಷ್ಟಮಿಹ ಯುಷ್ಮಾಭಿಸ್ತಚ್ಛೃಣುಧ್ವಂ ಸಮಾಹಿತಾಃ ‖ ೪ ‖ ಪುರಾ ಸರ್ವೇಶ್ವರಂ ದೇವಂ ಮಂದರಾಚಲಸಂಸ್ಥಿತಮ್ । ಸ್ಕಂದಃ ಸ್ವಪಿತರಂ ನತ್ವಾ ಪಪ್ರಚ್ಛೇದಂ ಮಹಾಮತಿಃ ‖ ೫ ‖ ಸ್ಕಂದ ಉವಾಚ ‖ ತಾತ ಭೂತೇಶ ಭಗವನ್ಮಯಾ ತ್ವತ್ತಃ ಶ್ರುತಂ ಮಹತ್ । ಗೋಕರ್ಣಕ್ಷೇತ್ರಮಾಹಾತ್ಮ್ಯಂ ತಲ್ಲಿಂಗಂ ಚ ಸುಪೂಜಿತಮ್ ‖ ೬ ‖ ಏತಾದೃಶಂ ಮಹಾಕ್ಷೇತ್ರಂ ಭುಕ್ತಿಮುಕ್ತಿಪ್ರದಂ ಪರಮ್ । ತ್ರಿಲೋಕ್ಯಾಮಪಿ ನೈವಾಸ್ತೀತ್ಯೇವಂ ಮೇ ಭಾತಿ ಶಂಕರ ‖ ೭ ‖ ತಥಾಽಪಿ ಸಿದ್ಧಿದಂ ಲೋಕೇ ತಾದೃಶಂ ಕ್ಷೇತ್ರಮಸ್ತಿ ಚೇತ್ । ಅಕಥ್ಯಮಪಿ ಸರ್ವಜ್ಞ ಕೃಪಯಾ ತದ್ವದಾದ್ಯ ಮೇ ‖ ೮ ‖ ಈಶ್ವರ ಉವಾಚ ‖ ಶೃಣು ಪುತ್ರ ಮಹಾಪ್ರಾಜ್ಞ ಕ್ಷೇತ್ರೋತ್ತಮತಮಂ ಮಹತ್ । ಕೋಲಾಪುರಮಿತಿ ಖ್ಯಾತಂ ಸ್ನೇಹಾ-**

---

ಲ್ಪಟ್ಟಿತು. ಈಗ ಕೋಲಾಪುರಕ್ಷೇತ್ರಮಾಹಾತ್ಮ್ಯವನ್ನು ನಮಗೆ ಹೇಳು ‖ ೩ ‖ ಸೂತನು ಹೇಳಿದನು— ಎಲೈ ಬ್ರಾಹ್ಮಣಶ್ರೇಷ್ಠರುಗಳಿರಾ! ನಿಮ್ಮುಗಳಿಂದೀಗ ಕೇಳಲ್ಪಟ್ಟದ್ದಾವುದಿರುವುದೋ, ಅದು ಸಕಲ ಪುರುಷಾರ್ಥಗಳನ್ನು ಕೊಡತಕ್ಕದ್ದಾಗಿಯೂ, ಅತಿ ಶ್ರೇಷ್ಠವಾಗಿಯೂ, ಇರುವುದರಿಂದ ನೀವೆಲ್ಲರೂ ಮನಸ್ಸಿಟ್ಟು ಕೇಳಿರಿ ‖ ೪ ‖ ಪೂರ್ವದಲ್ಲಿ ಅತ್ಯಂತ ಬುದ್ಧಿಶಾಲಿಯಾದ ಸ್ಕಂದನು ಮಂದರಾದ್ರಿಯಲ್ಲಿರುವ ನನ್ನ ತಂದೆಯಾದ ಸರ್ವೇಶ್ವರನನ್ನು ನಮಿಸಿ ಇದನ್ನು ಕೇಳಿದನು ‖ ೫ ‖ ಎಲೈ ಭೂತಪತಿಯಾಗಿಯೂ, ಭಗವಂತನಾಗಿಯೂ ಇರುವ ತಂದೆಯೆ! ನಿನ್ನ ದೆಸೆಯಿಂದ ಮಹತ್ತಾದ ಗೋಕರ್ಣಕ್ಷೇತ್ರಮಾಹಾತ್ಮ್ಯವು ನನ್ನಿಂದ ಕೇಳಲ್ಪಟ್ಟದ್ದಲ್ಲದೆ, ಆ ಪ್ರಾಣಲಿಂಗವೂ ಪೂಜಿಸಲ್ಪಟ್ಟಿತು ‖ ೬ ‖ ಎಲೈ ಶಂಕರನೆ! ಈ ಗೋಕರ್ಣಕ್ಷೇತ್ರದಂತೆ ಭೋಗಮೋಕ್ಷಗಳನ್ನು ಕೊಡುವುದಾದ ಮಹಾಕ್ಷೇತ್ರವು ಬೇರೊಂದು ಮೂರು ಲೋಕದಲ್ಲಿಯೂ ಇಲ್ಲವೆಂದೆನಗೆ ತೋರುತ್ತದೆ ‖ ೭ ‖ ಎಲೈ ಸರ್ವಜ್ಞನೆ! ಹಾಗಾದರೂ ಲೋಕದೊಳಂತಹ ಸಿದ್ಧಕ್ಷೇತ್ರವಾವುದಾದರೊಂದಿದ್ದರೆ ಹೇಳಬಾರದಾದರೂ, ಅದನ್ನೀಗ ಎನಗೆ ಕೃಪೆಯಿಂದ ಹೇಳು ‖ ೮ ‖ ಈಶ್ವರನು ಹೇಳಿದನು— ಎಲೈ ಮಹಾಪ್ರಾಜ್ಞನಾದ ಪುತ್ರನೆ! ಕೇಳು. ಕೋಲಾಪುರವೆಂದು ಪ್ರಸಿದ್ಧವಾಗಿರುವುದೊಂದತ್ಯುತ್ತಮವಾದ ಮಹಾಕ್ಷೇತ್ರವಿರುವುದು.

ತ್ವತ್ಪ್ರಕಟೀಕೃತಮ್ ॥ ೯ ॥ ಸರ್ವಸ್ಯಾಽದ್ಯಾ ಮಹಾಲಕ್ಷ್ಮೀಸ್ತ್ರಿಗುಣಾ ಪರಮೇಶ್ವರೀ। ಲಕ್ಷ್ಯಾಲಕ್ಷ್ಯಸ್ವರೂಪಾ ಸಾ ವ್ಯಾಪ್ಯ ಕೃತ್ಸ್ನಂ ವ್ಯವಸ್ಥಿತಾ ॥ ೧೦ ॥ ಇತ್ಯೇಷಾ ಶ್ರೀಮಹಾಲಕ್ಷ್ಮೀರಸ್ಮದಾದಿಜಗತ್ಪ್ರಸೂಃ। ಆಸ್ತೇ ಯತ್ರಾತ್ರ ಏವೇದಂ ಕ್ಷೇತ್ರಂ ಗೋಕರ್ಣತೋಽಧಿಕಮ್ ॥೧೧॥ ಪೂರ್ವಂ ಖಲೂತ್ತಮಮನೋರಂತರೇ ಬ್ರಹ್ಮವಿತ್ತಮಃ। ಕೋಲೋ ನಾಮ ಮುನಿಶ್ರೇಷ್ಠಃ ಸರ್ವಲೋಕೇಷು ವಿಶ್ರುತಃ ॥ ೧೨ ॥ ಗೋಕರ್ಣಾದ್ದಕ್ಷಿಣೇ ದೇಶೇ ದಶಯೋಜನಸನ್ಮಿತೇ। ಉಪತ್ಯಕಾಯಾಂ ಸಹ್ಯಾದ್ರೇರ್ಮಹಾರಣ್ಯಪುರಾಭಿಧೇ ॥ ೧೩ ॥ ಕಲ್ಪಯಿತ್ವೋಟಜಂ ಸೋಽಯಂ ಮಾಮುದ್ದಿಶ್ಯ ಮಹತ್ತಪಃ। ತಪ್ತ್ವಾಽತ್ರ ಸುಚಿರಂ ಮತ್ತಃ ಪ್ರಸನ್ನಾದೀಪ್ಸಿತಾನ್ವರಾನ್ ॥ ೧೪ ॥ ಲಬ್ಧ್ವಾಽಪ್ಯಥ ಮುನಿಶ್ರೇಷ್ಠಃ ಕ್ಷೇತ್ರಮೇತನ್ಮದಾಖ್ಯಯಾ। ಪ್ರಸಿದ್ಧಿಂ ಯಾತ್ವಿತಿ ಸ ಮಾಂ ಪ್ರಾರ್ಥಯಾಮಾಸ ಸಾದರಮ್ ॥ ೧೫ ॥ ತಥಾಽಸ್ತ್ವಿತಿ ಮಯಾ ಪ್ರೋಕ್ತೇ

---

ಅದು ನಿನ್ನ ಸ್ನೇಹದದೆಸೆಯಿಂದ ಮಾತ್ರ ಪ್ರಕಟಿಸಲ್ಪಟ್ಟಿತು ॥ ೯ ॥ ಸಮಸ್ತಕ್ಕೂ ಆದಿಭೂತಳಾಗಿಯೂ ತ್ರಿಗುಣಾತ್ಮಿಕೆಯಾಗಿಯೂ, ಮುಖ್ಯಳಾದ ಒಡತಿಯಾಗಿಯೂ, ದೃಶ್ಯಾದೃಶ್ಯಸ್ವರೂಪಿಣಿಯಾಗಿಯೂ ಇರುವ ಮಹಾಲಕ್ಷ್ಮಿಯು ಸಕಲ ಜಗತ್ತನ್ನೂ ವ್ಯಾಪಿಸಿರುವಳು ॥ ೧೦ ॥ ಹೀಗೆ ಸಪ್ತಶತೀ ಪ್ರಾಧಾನಿಕ ರಹಸ್ಯದಲ್ಲಿ ಹೇಳಲ್ಪಟ್ಟವಳಾಗಿಯೂ, ನಾವೇ ಮೊದಲಾದ ಜಗತ್ತಿಗೆ ತಾಯಿಯಾಗಿಯೂ ಇರುವ ಈ ಶ್ರೀಮಹಾಲಕ್ಷ್ಮಿಯು ಈ ಕೋಲಾಪುರಕ್ಷೇತ್ರದಲ್ಲಿರುವುದರಿಂದ ಇದು ಗೋಕರ್ಣಕ್ಕಿಂತಲೂ ಹೆಚ್ಚಾಗಿರುವುದು ॥ ೧೧ ॥ ಹಿಂದೆ ಉತ್ತಮನೆಂಬ ಮೂರನೆ ಮನುವಿನ ಅಂತರದಲ್ಲಿ ಬ್ರಹ್ಮನಿಷ್ಠನಾದ ಕೋಲನೆಂಬ ಮಹಾಮುನಿಯು ಮೂರು ಲೋಕಗಳಲ್ಲಿಯೂ ಪ್ರಸಿದ್ಧನಾಗಿದ್ದನು ॥ ೧೨ ॥ ಆತನು ಗೋಕರ್ಣದಿಂದ ಹತ್ತುಯೋಜನ ಅಗಲವಿರುವ ದಕ್ಷಿಣದೇಶದಲ್ಲಿ ಸಹ್ಯಾದ್ರಿಯ ಸಮೀಪಸ್ಥಿತವಾದ ಮಹಾರಣ್ಯಪುರವೆಂಬಲ್ಲಿ ॥ ॥ ೧೩ ॥ ಪರ್ಣಶಾಲೆಯನ್ನು ರಚಿಸಿ ಬಹುಕಾಲಪರ್ಯಂತವಾಗಿ ನನ್ನನ್ನು ಕುರಿತು ಮಹತ್ತಾದ ತಪಸ್ಸನ್ನು ಮಾಡಿ, ಸಂತುಷ್ಟನಾದ ನನ್ನ ದೆಸೆಯಿಂದ ಅಭೀಷ್ಟವರಗಳನ್ನು ॥ ೧೪ ॥ ಪಡೆದರೂ, ಪುನಃ ಆ ಮುನಿಶ್ರೇಷ್ಠನು ಈ ಕ್ಷೇತ್ರವು ನನ್ನ ನಾಮದಿಂದಲೇ ಪ್ರಸಿದ್ಧಿಹೊಂದಲಿ, ಎಂದು ವಿನಯದಿಂದ ನನ್ನನ್ನು ಕುರಿತು ಪ್ರಾರ್ಥಿಸಿದನು ॥ ೧೫ ॥ ಹಾಗಾಗಲೆಂದು ನನ್ನಿಂದ ಹೇಳ

ತತ್ಪ್ರಭೃತ್ಯೇಷ ಆಶ್ರಮಃ । ಕೋಲಾಪುರಕ್ಷೇತ್ರಮಿತಿ ಪ್ರಖ್ಯಾತಃ ಪೃಥಿವೀತಲೇ ॥೧೬॥ ಇದಮನ್ಯದೃಷೀಶಂ ತಂ ಪುನರಪ್ಯಹಮಬ್ರುವಮ್ । ತಪಃಪ್ರಭಾವಾತ್ತೇ ಮೇ ಚಾನುಗ್ರಹಾದಧುನೈವ ಹಿ ॥ ೧೭ ॥ ಇದಂ ಕೋಲಾಪುರಂ ಸಿದ್ಧಕ್ಷೇತ್ರಮೇವಾಸ್ತಿ ಚೇದಪಿ । ಇತಃ ಪ್ರಭೃತಿ ಮನ್ಮೂರ್ತಿಂ ಪಾರ್ಥಿವೀಂ ಪೂಜಯನ್ಸದಾ ॥ ೧೮ ॥ ತಪಃ ಕರೋಷಿ ಚೇತ್ತಾಪಸಾಖ್ಯಮನ್ವಂತರೇಽತ್ರ ತು। ಪರಾಶ್ವೈವೀತಿ ಯಾ ಶಕ್ತಿರ್ಯಾ ಮಹಾವೈಷ್ಣವೀತಿ ಚ ॥ ೧೯ ॥ ತಸ್ಯಾಃ ಶ್ರೀಮನ್ಮಹಾಲಕ್ಷ್ಮ್ಯಾ ನಿವಾಸೋ ಭವಿತಾ ಸ್ಫುಟಮ್ । ತದಾಪ್ರಭೃತ್ಯದಃ ಸ್ಥಾನಂ ಸರ್ವಕ್ಷೇತ್ರೋತ್ತಮಂ ಭವೇತ್ ॥ ೨೦ ॥ ಏವಮುಕ್ತ್ವಾ ತದಾನೀಂ ತು ತಸ್ಮೈ ಕೋಲರ್ಷಯೇ ಮಯಿ । ಅಂತರ್ಧಾನಂ ಗತೇ ತೇನ ಕೃತಂ ಸರ್ವಂ ಯಥೋದಿತಮ್ ॥ ೨೧ ॥ ಅಥ ಕಂಹಾಸುರೋ ನಾಮ ದೈತ್ಯಃ ಶ್ರೀಭೈರವೀಂ ಭೃಶಮ್ । ಆರಾಧ್ಯ ತಪಸಾ ಪುಂಭಿರವಧ್ಯತ್ವಂ ಗತಃ ಪುನಃ ॥ ೨೨ ॥ ಸಮಾಗತ್ಯಾಶ್ರಮೇಽತ್ರೈನಂ ಸಮಾಧಿಸ್ಥಂ

---

ಲಿಕ್ಕಾಗಿ ಆ ಮೊದಲುಗೊಂಡು ಈ ಮಹಾರಣ್ಯಪುರನೆಂಬಾಶ್ರಮವು ಕೋಲಾಪುರವೆಂದು ಭೂಮಿಯಲ್ಲಿ ಪ್ರಖ್ಯಾತವಾದುದು ॥ ೧೬ ॥ ಮತ್ತೂ ಆ ಋಷಿಶ್ರೇಷ್ಠನನ್ನು ಕುರಿತು ನಾನು ಈ ಬೇರೊಂದು ವಿಷಯವನ್ನು ಹೇಳಿದೆನದೆಂತೆನೆ-ನಿನ್ನ ತಪಸ್ಸಿನ ಪ್ರಭಾವದದೆಸೆಯಿಂದಲೂ, ನನ್ನ ಅನುಗ್ರಹದದೆಸೆಯಿಂದಲೂ, ಈಗಲೇ ॥ ೧೭ ॥ ಈ ಕೋಲಾಪುರವು ಸಿದ್ಧಕ್ಷೇತ್ರವಾಗಿದೆ. ಹಾಗಾದರೂ, ನೀನು ಈ ಮೊದಲುಗೊಂಡು ನಿತ್ಯವೂ ಪಾರ್ಥಿವಲಿಂಗಪೂಜೆಯನ್ನು ಮಾಡುತ್ತಾ ॥ ೧೮ ॥ ತಪಸ್ಸನ್ನು ಮಾಡುತ್ತಿರುವೆಯಾದರೆ ನಾಲ್ಕನೆಯ ತಾಪಸಮನ್ವಂತರದಲ್ಲಿ ಈ ಕೋಲಾಪುರದಲ್ಲಿ ಪರಾಶ್ವೈವಿಯೆಂತಲೂ, ಮಹಾವೈಷ್ಣವಿಯೆಂತಲೂ ಯಾವ ಶಕ್ತಿಯಿರುವಳೋ ॥ ೧೯ ॥ ಆ ಶ್ರೀಮಹಾಲಕ್ಷ್ಮಿಯ ವಾಸವು ನಿಶ್ಚಯವಾಗಿಯೂ ಆಗುತ್ತದೆ. ಆ ಮೊದಲುಗೊಂಡು ಈ ಸ್ಥಾನವು ಸಕಲ ಕ್ಷೇತ್ರಗಳಿಗೂ ಶ್ರೇಷ್ಠವಾದೀತು ॥ ೨೦ ॥ ಈ ಪ್ರಕಾರವಾಗಿ ನಾನಾ ಕೋಲಋಷಿಗೆ ಹೇಳಿ ಅಂತರ್ಧಾನವನ್ನು ಹೊಂದಲು, ಮುನಿಯಿಂದ ಸರ್ವವೂ ಹೇಳಿದಂತೆಯೇ ಮಾಡಲ್ಪಟ್ಟಿತು ॥ ೨೧ ॥ ಆಮೇಲೆ ಕಂಹನೆಂಬೊಬ್ಬ ದೈತ್ಯನು ಭೈರವೀದೇವಿಯನ್ನತ್ಯಂತವಾಗಿ ತಪಸ್ಸಿನಿಂದಾರಾಧಿಸಿ ಪುರುಷರಿಂದ ಅವಧ್ಯತ್ವವನ್ನು ಪಡೆದು ಪುನಃ ॥ ೨೨ ॥ ಈ ಕೋಲಾಪುರದಲ್ಲಿ ಬಂದು ಸಮಾಧಿನಿಷ್ಠ

**ಮಹಾಮುನಿಮ್ । ದೂರತಃ ಸ್ಥಾಪಯಿತ್ವಾಽಥ ಸ್ವಯಂ ವಾಸಂ ಚಕಾರ ಸಃ ॥ ೨೩ ॥ ತತಸ್ತು ಸ್ವಜನೈಃ ಸಾರ್ಧಂ ಭೃಶಂ ತೇನಾಮರಾರಿಣಾ । ತ್ರೈಲೋಕ್ಯೇ ದೂಷಿತೇ ಚಾಸ್ಮಿನ್ ಕ್ಷೇತ್ರೇ ಸತಿ ಸುದುರ್ಗಮೇ ॥ ೨೪ ॥ ಯುದ್ಧಾರ್ಥಮಾಗತಾಂ ದೇವೀಂ ದೃಷ್ಟ್ವಾ ತ್ರಿಪುರಭೈರವೀಮ್ । ಋಷ್ಯಮೂಕಗಿರಿಂ ಯಾತೋ ಭೀತೋ ಯಂ ತಪಸೇ ಖಲಃ ॥೨೫॥ ಮನ್ವಂತರೇ ತುರೀಯೇ ತು ಗತೇ ಪಶ್ಚಾತ್ಕೃತೇ ಯುಗೇ । ಚತುಃಷಷ್ಟಿತಮೇ ಜಾತೋ ಮಹಿಷೋ ನಾಮ ದೈತ್ಯರಾಟ್ ॥ ೨೬ ॥ ಸ ಚಾಸ್ಮಿನ್ಕಂಹನಗರೇ ದೈತ್ಯಸೇನಾಸಮಾವೃತಃ । ಕೃತ್ವಾ ವಾಸಂ ತ್ರಿಲೋಕೀಂ ಚ ಜಿತ್ವೇಂದ್ರೋಽಸೌ ಬಭೂವ ಹ ॥ ॥ ೨೭ ॥ ಏಕದಾ ಮುನಿರಾಟ್ಸೋಽಯಂ ಪ್ರಾಪ್ತಬೋಧಃ ಸಮಾಧಿತಃ । ಜ್ಞಾತ್ವಾ ಕಂಹಕೃತಂ ದೈತ್ಯೈರಾವೃತಂ ಚ ನಿಜಾಶ್ರಮಮ್ ॥ ॥ ೨೮ ॥ ತಪಸ್ತೇಪೇ ಪುನರ್ವಿಷ್ಣುಂ ಮಾಂ ಚ ಸಾದರಮಾತ್ಮಜ । ಕದಾಚಿದಾವಾಂ ಯಾವತ್ತಂ ಬೋಧಯೇವ ಸಮಾಧಿತಃ ॥ ೨೯ ॥**

---

ನಾದ ಕಾರಣದಿಂದ ಮಹಾಮುನಿಯನ್ನು ದೂರಮಾಡಿ ಬಳಿಕ ಅವನು ತಾನೇ ವಾಸಮಾಡಿದನು ॥ ೨೩ ॥ ಆಮೇಲೆ ಸ್ವಜನರಾದ ದೈತ್ಯರಿಂದ ಕೂಡಿ ಆ ದೇವದ್ವೇಷಿಯಾದ ಕಂಹನಿಂದ ಅತ್ಯಂತವಾಗಿ ಮೂರು ಲೋಕವೂ ಕೆಟ್ಟದ್ದಲ್ಲದೆ ಈ ಕ್ಷೇತ್ರವೂ ಪ್ರವೇಶಿಸಲತ್ಯಂತವಾಗಿ ಅಸಾಧ್ಯವಾಗಲು ॥ ೨೪ ॥ ಇವನೊಡನೆ ಯುದ್ಧಕ್ಕೋಸ್ಕರ ತ್ರಿಪುರಭೈರವಿಯು ಬಂದಳು. ಬಳಿಕ ಇವಳನ್ನು ಕಂಡು ಕಂಹಾಸುರನು ಭಯಪಟ್ಟು ತಪಸ್ಸಿಗೋಸ್ಕರ ಋಷ್ಯಮೂಕಾದ್ರಿಯನ್ನು ಯೈದಿದನು ॥ ೨೫ ॥ ಆಮೇಲೆ ನಾಲ್ಕನೆಯ ತಾಪಸಮನ್ವಂತರವು ಪ್ರಾಪ್ತವಾದಲ್ಲಿ ಅರವತ್ತನಾಲ್ಕನೆಯ ಕೃತಯುಗದಲ್ಲಿ ಮಹಿಷನೆಂಬ ಮಹಾದೈತ್ಯನುಂಟಾದನು ॥ ೨೬ ॥ ಆತನು ಈ ಕಂಹಾಸುರನ ಪಟ್ಟಣವಾದ ಕೋಲಾಪುರದಲ್ಲಿ ದೈತ್ಯಸೇನೆಯಿಂದ ಕೂಡಿ ವಾಸಮಾಡಿ ಮೂರು ಲೋಕವನ್ನೂ ಜಯಿಸಿ ಇಂದ್ರನಾದನು ॥ ೨೭ ॥ ಆಮೇಲೆ ಒಂದಾನೊಂದು ಕಾಲದಲ್ಲಿ ಮುನಿಶ್ರೇಷ್ಠನು ಸಮಾಧಿಯ ದೆಸೆಯಿಂದೆಚ್ಚರಿತು ಕಂಹಾಸುರನ ಚೇಷ್ಟೆಯನ್ನೂ, ತನ್ನಾಶ್ರಮವು ದೈತ್ಯರಿಂದಾಶ್ರಯಿಸಲ್ಪಟ್ಟಿರುವುದನ್ನೂ ತಿಳಿದು ॥ ॥ ೨೮ ॥ ಮತ್ತೂ ವಿಷ್ಣುವನ್ನೂ ನನ್ನನ್ನೂ ಕುರಿತು ತಪಸ್ಸುಮಾಡಿದನು. ಎಲೈ ಮಗನೆ! ಒಂದಾನೊಂದು ಕಾಲದಲ್ಲಿ ನಾವಿಬ್ಬರೂ ಯಾವಾಗ ಮುನಿ

ತಾವತ್ಸಮಾಗತಾ ದೇವಾ ಯತ್ರೇಶಗರುಡಧ್ವಜೌ । ಗತಾವಾಸಾನ್ ಹೃತಶ್ರೀಕಾನ್ಸ್ವಜಾಂಸ್ತಾನ್ಮಹಿಷಾರ್ದಿತಾನ್ ॥೩೦॥ ವಿಜ್ಞಾಪಿತಸ್ವ-ವೃತ್ತಾಂತಾನ್ ದೃಷ್ಟ್ವಾಽಸ್ಮತ್ತಃ ಕ್ರುಧುತ್ಥಿತಃ । ತತೋಽತಿಕೋಪ-ಪೂರ್ಣಸ್ಯ ಹರೇರ್ಮುಖಾ ಚ ವೇಧಸಃ ॥ ೩೧ ॥ ಇಂದ್ರಾದೀನಾಂ ತಥಾನ್ಯೇಷಾಂ ಸರ್ವೇಷಾಮಸುರದ್ವಿಷಾಮ್ । ಮುಖೇಭ್ಯೋ ನಿರ್ಗ-ತಂ ಸದ್ಯಸ್ತೇಜೋ ಭೂಯೋ ಮಹೋಜ್ಜ್ವಲಮ್॥೩೨॥ ಸ ತೇಜೋ ಗಿರಿರೇಕಸ್ಥಃ ಪುನಃ ಸದ್ಯುವತಿರ್ಬಭೌ । ಅಥೈಷಾ ಶ್ರೀಮಹಾಲಕ್ಷ್ಮೀಃ ಸರ್ವದೇವಾತ್ಮಿಕಾ ಪರಾ ॥ ೩೩ ॥ ಮಹಾಟ್ಟಹಾಸಮಕರೋದ್ರಿ-ಪುಹೃತ್ಕಂಪಹೇತವೇ । ಶ್ರುತ್ವಾ ತಂ ನಿನದಂ ಘೋರಂ ಸಸೈನ್ಯೋ ಮಹಿಷಾಸುರಃ ॥ ೩೪ ॥ ಯೋದ್ಧುಮಭ್ಯಾಗತಸ್ತೇನ ಯುಯುಧೇ ಸಹಸಾಽಂಬಿಕಾ । ತತೋ ಯುದ್ಧೇ ಸಮಾರಬ್ಧೇ ತಯೋರ್ಲೋಕ-

---

ಯನ್ನು ಸಮಾಧಿಯ ದೆಸೆಯಿಂದೆಚ್ಚರಿಸಿದೆವೋ ॥ ೨೯ ॥ ಆವಾಗ ಈಶ ಗರುಡಧ್ವಜರೆಂಬ ನಾವಿಬ್ಬರಿರುವಲ್ಲಿ ದೇವತೆಗಳು ಬಂದರು. ಆಗ ಸ್ಥಾನ, ಐಶ್ವರ್ಯ ಮೊದಲಾದ್ದನ್ನು ಕಳಕೊಂಡು ಮಹಿಷಾಸುರನಿಂದ ಪೀಡಿತರಾಗಿ ॥ ೩೦ ॥ ಬ್ರಹ್ಮದೇವನಿಂದೊಡಗೂಡಿರುವ ಆ ದೇವತೆಗಳು ತಮ್ಮ ಕಷ್ಟಗಳನ್ನು ತಿಳಿಸಲು ನಮಗೆ ಕೋಪವುಂಟಾಯಿತು. ಬಳಿಕ ಕೋಪಭರಿತನಾದ ವಿಷ್ಣು ನಾನು ಬ್ರಹ್ಮ ॥ ೩೧ ॥ ಬೇರೆ ಇಂದ್ರಾದಿ ಎಲ್ಲ ದೇವತೆಗಳ ಮುಖಗಳ ದೆಸೆಯಿಂದಲೂ ಆ ಕ್ಷಣದಲ್ಲಿಯೇ ದೊಡ್ಡದಾಗಿ ಪ್ರಜ್ವಲಿಸುವ ಬಹಳವಾದ ತೇಜಸ್ಸು ಹೊರಟಿದ್ದಾಗಿ ॥ ೩೨ ॥ ಒಂದು ಸ್ಥಳದಲ್ಲಿಯೇ ಪರ್ವತದಂತೆ ನಿಂತು ಪುನಃ ಪ್ರಶಸ್ತಳಾದ ಸ್ತ್ರೀಯಾಗಿ ಕಾಣಿಸಿಕೊಂಡಿತು. ಇವಳೇ ಸಮಸ್ತ ದೇವತಾಸ್ವರೂಪಿಣಿಯಾದ ಆದಿಮಹಾಲಕ್ಷ್ಮಿಯಾಗಿರುವಳು. ಸಪ್ತಶತಿಗೆ ವೈಕೃತಿಕ ರಹಸ್ಯದಲ್ಲಿ–"ಸರ್ವದೇವಶರೀರೇಭ್ಯೋ ಯಾಽಽವಿರ್ಭೂತಾಽಮಿತ-ಪ್ರಭಾ । ತ್ರಿಗುಣಾ ಸಾ ಮಹಾಲಕ್ಷ್ಮೀಃ ಸಾಕ್ಷಾನ್ಮಹಿಷಮರ್ದಿನೀ ॥" ಎಂದು ಹೇಳಲ್ಪಟ್ಟಿದೆ ॥೩೩॥ ಆಮೇಲೆ ಈ ದೇವಿಯು, ದೈತ್ಯರ ಹೃದಯವನ್ನಡಗಿಸ ಲೋಸ್ಕರ ದೊಡ್ಡದಾದ ಲೊಟ್ಟೆಯನ್ನು ಹೊಡೆಯಲು ಭಯಂಕರವಾದ ಶಬ್ದ ವನ್ನು ಕೇಳಿ ಮಹಿಷಾಸುರನು ಸೇನಾಸಮೇತನಾಗಿ ॥ ೩೪ ॥ ಯುದ್ಧ ಕ್ಕೋಸ್ಕರ ಬರಲು ಅವನೊಡನೆ ದೇವಿಯು ಆ ಕೂಡಲೆ ಯುದ್ಧವನ್ನು ಮಾಡಿದಳು. ಬಳಿಕ ಆ ದೇವಿಗೂ ಮಹಿಷನಿಗೂ ಲೋಕಭಯಂಕರವಾದ

**ಭಯಂಕರೇ ॥ ೩೫ ॥ ಮಯಿ ವಿಷ್ಣೌ ಚ ಕೋಲರ್ಷಾವಸ್ಮಾಸ್ವೇ-
ಕತ್ರ ಚ ತ್ರಿಷು। ಪಶ್ಯತ್ಸ್ವತದ್ವಿಶಸನಂ ಸೂಪವಿಷ್ಟೇಷು ಸತ್ಸ್ವಹಮ್॥
॥ ೩೬ ॥ ಪೂರ್ವಂ ವಿನಿರ್ಗತಂ ತೇಜೋಗಿರಿಂ ನಿರುಪಮಂ ಪುನಃ ।
ಸ್ಮೃತ್ವಾ ತು ಧ್ಯಾನಸಾಮರ್ಥ್ಯಾದ್ದ್ರಷ್ಟರಿಶ್ರೀಪತೌ ಸ್ಫುಟಮ್॥೩೭॥
ಯತ್ರ ಕೋಲರ್ಷಿಣಾ ಲಿಂಗಂ ಪಾರ್ಥಿವಂ ಬಹುಧಾಽರ್ಚಿತಮ್ ।
ತತ್ರಾತಿಪಾವನೇ ಸ್ಥಾನೇ ಸರ್ವಲೋಕಹಿತಾಯ ಚ ॥ ೩೮ ॥ ಮಹ-
ಜ್ಜ್ಯೋತಿಸ್ತದಲಿಖಮಹಂ ಯದ್ಧಿ ಪರಾತ್ಪರಮ್ । ಮಯಾಽತ್ರ
ಲಿಖಿತಂ ಪ್ರಾಹುರ್ಲೋಕೇ ಶ್ರೀಚಕ್ರಮಿತ್ಯದಃ ॥ ೩೯ ॥ ಯಚ್ಚೈ-
ತನ್ಯಮಯಂ ಸಾಕ್ಷಾತ್ಪ್ರಾಣರೂಪೇಣ ಸಂಸ್ಥಿತಮ್ । ಅಪರಿಚ್ಛೇದ್ಯ-
ಚರಿತಂ ಸಾಕ್ಷಾಚ್ಚಿದ್ಬಿಂಬಸನ್ನಿಭಮ್ ॥ ೪೦ ॥ ನಿಗ್ರಹಾನುಗ್ರಹ-
ಕರಂ ಸತಾಂ ಸತ್ಕಲ್ಪಪಾದಪಮ್ । ಸ್ವಮಹಾಭೂತಿಸಂಪ್ರೋತ-
ಸಹಸ್ರಾಜಾಂಡಮಚ್ಯುತಮ್ ॥ ೪೧ ॥ ಪೂರ್ವಂ ಹಿ ಪ್ರಕೃತಿಃ**

---

ಯುದ್ಧವು ಪ್ರಾರಂಭಿಸಲು ॥ ೩೫ ॥ ನಾನು, ವಿಷ್ಣು ಕೋಲರ್ಷಿ, ಈ ನಾವು ಮೂವರೂ ಒಂದು ಸ್ಥಳದಲ್ಲಿ ಆ ಯುದ್ಧವನ್ನು ನೋಡುತ್ತಾ ಸುಖದಿಂದ ಕುಳಿತಿರಲಿಕ್ಕಾಗಿ ನಾನು ॥ ೩೬ ॥ ಹಿಂದೆ ಆ ಸಕಲ ದೇವತೆಗಳ ದೇಹದದೆಸೆಯಿಂದ ಹೊರಟಿರುವ ಅತ್ಯುತ್ಕೃಷ್ಟವಾದ ತೇಜೋಗಿರಿಯನ್ನು ಪುನಃ ಸ್ಮರಿಸಿ ವಿಷ್ಣುವು ನೋಡುವ ತೆರದಿ ಧ್ಯಾನಸಾಮರ್ಥ್ಯದಿಂದ ॥ ೩೭ ॥ ಕೋಲರ್ಷಿಯಿಂದ ಅತ್ಯಂತವಾಗಿ ಪೂಜಿಸಲ್ಪಟ್ಟ ಪಾರ್ಥಿವಲಿಂಗವು ಬಹು ಪವಿತ್ರವಾದ ಸ್ಥಳದಲ್ಲಿ ಸಕಲಜನರಿಗೂ ಉಪಕಾರವಾಗಲೋಸ್ಕರ ॥ ೩೮ ॥ ಆ ಸರ್ವೋತ್ತಮವಾಗಿರುವ ತೇಜಸ್ಸನ್ನು ಸ್ಪಷ್ಟವಾಗಿ ಬರೆದೆನು. ಆ ನನ್ನಿಂದ ಬರೆಯಲ್ಪಟ್ಟಿರುವುದನ್ನು ಲೋಕದಲ್ಲಿ ತೇಜೋಮಯ ಶ್ರೀಚಕ್ರವೆಂದು ಹೇಳುವರು ॥ ॥ ೩೯ ॥ ಇದು ಸಾಕ್ಷಾತ್ ಸರ್ವಚೈತನ್ಯಾತ್ಮಕವಾಗಿಯೂ, ಪ್ರಾಣರೂಪವಾಗಿಯೂ, ಅಪರಿಮಿತ ಮಹಿಮೆಯುಳ್ಳದ್ದಾಗಿಯೂ ಪ್ರತ್ಯಕ್ಷವಾಗಿ ಚಿದಾತ್ಮಕವಾಗಿಯೂ ॥ ೪೦ ॥ ದುಷ್ಟರ ನಿಗ್ರಹವನ್ನೂ, ಶಿಷ್ಟರ ಅನುಗ್ರಹವನ್ನು ಮಾಡುವುದಾಗಿಯೂ, ಆರಾಧಕರಿಗೆ ಸಾಕ್ಷಾತ್ ಕಲ್ಪವೃಕ್ಷದಂತೆ ಇಷ್ಟಾರ್ಥಗಳನ್ನು ಸುರಿಸುವುದಾಗಿಯೂ, ತನ್ನ ಮಹತ್ತಾದ ಚಿತ್ಪ್ರಭೆಯೆಂಬ ಐಶ್ವರ್ಯದಿಂದ ಹೊಲಿಯಲ್ಪಟ್ಟ ಅನೇಕ ಬ್ರಹ್ಮಾಂಡಗಳುಳ್ಳದ್ದಾಗಿಯೂ, ಷಡ್ಭಾವರಹಿತವಾಗಿಯೂ ಇರುತ್ತದೆ ॥ ೪೧ ॥ ಹಿಂದೆ ಸೃಷ್ಟ್ಯಾದಿಯಲ್ಲಿ

**ಸೇಯಮೇತಚ್ಚಕ್ರಂ ಮಯಾ ಯತಃ । ಅತಃ ಶ್ರೀಚಕ್ರಮೇತದ್ಧಿ ವಿದ್ಧಿ ಸಾಕ್ಷಾಚ್ಛಿವಾತ್ಮಕಮ್ ॥ ೪೨ ॥ ತತೋಽಪಿ ವಿಷ್ಣುರ್ದೃಷ್ಟ್ವೇದಂ ಗೋಪಯಾಮಾಸ ಯತ್ನತಃ । ತಸ್ಯಾಕಾರಮಿಮಂ ವಕ್ಷ್ಯೇ ಸಮಾಕರ್ಣಯ ಹೇ ಸುತ ॥ ೪೩ ॥ ಯಸ್ಯಾಸ್ತಿ ಪ್ರತಿಸಂಧಿವೃತ್ತಸಹಿತಂ ಮಧ್ಯಂ ಸಬಿಂದುಕ್ರಮಾದ್ವ್ಯಾಮಾಷ್ಟಾರ್ಯಮಭೂಪವಿಂಶತಿಜಿನಾಃ ಕೋಣಾನ್ಯಥಾಷ್ಟೌ ನೃಪಾಃ । ಷಟ್ತ್ರಿಂಶತ್ಪಶರಾದಲಾನಿ ಪರಿತೋ ವೃತ್ತದ್ವಯಂ ಭೂಪುರಂ ಶ್ರೀಚಕ್ರಂ ಪ್ರಕೃತೇರಿದಂ ಹಿ ಸಕಲಾ ಮತ್ಯೋರ್ತ್ಥತೇಜೋಮಯಮ್ ॥ ೪೪ ॥ ಏವಂ ವಿರಚಿತೇ ಜ್ಯೋತಿಶ್ಚಕ್ರೇ ಸತಿ ಷಡಾನನ । ನಿಯುಧ್ಯ ದೇವೀ ಸುಚಿರಮವಧೀನ್ಮಹಿಷಾಸುರಮ್ ॥ ೪೫ ॥ ಇತಿ ಸಮಸ್ತಸುರಾಸ್ಯವಿನಿರ್ಗತಾ ಜಿತಸಮಸ್ತಸುರಾರಿಕದಂಬಕಾ । ಶತಸಹಸ್ರಸಹಸ್ರಕರದ್ಯುತೀರತಿಸಹಸ್ರ-**

---

ಈ ಶ್ರೀಮಹಾಲಕ್ಷ್ಮಿಯು ಶ್ರೀಚಕ್ರರೂಪಿಣಿಯಾಗಿದ್ದ ಕಾರಣದಿಂದ ಚಕ್ರರಾಜನನ್ನು ಸಾಕ್ಷಾತ್ ದೇವೀರೂಪವಾಗಿ ತಿಳಿ ॥ ೪೨ ॥ ನಾನು ಬರೆದ ನಂತರ ಇದನ್ನು ನೋಡಿ ವಿಷ್ಣುವು ಯಾರೂ ಅರಿಯದಂತೆ ಗುಟ್ಟಿನಿಂದ ಇಟ್ಟುಕೊಂಡನು. ಎಲೈ ಮಗನೆ! ಆ ಶ್ರೀಚಕ್ರದ ಹೀಗಿರುವ ಆಕಾರವನ್ನು ಹೇಳುವೆನು, ಕೇಳು ॥ ೪೩ ॥ ಮಧ್ಯದಲ್ಲಿ ಬಿಂದು, ಹಾಗೆ ಸುತ್ತಲೂ ಕ್ರಮದಿಂದ ತ್ರಿಕೋಣ, ಅಷ್ಟಕೋಣ, ದ್ವಾದಶಕೋಣ, ಷೋಡಶಕೋಣ, ವಿಂಶತಿಕೋಣ ಚತುರ್ವಿಂಶತಿಕೋಣಗಳೂ, ಬಳಿಕ ಅಷ್ಟದಳ, ಷೋಡಶದಳ, ಷಟ್ತ್ರಿಂಶದ್ದಳ, ಪಂಚಾಶದ್ದಳಗಳೂ, ಆ ಮೇಲೆ ವೃತ್ತಗಳೆರಡೂ, ಭೂಪುರಗಳು ಮೂರು, ಮಧ್ಯದ ಬಿಂದು ಮೊದಲುಗೊಂಡು ಪಂಚಾಶದ್ದಳಗಳ ಅಂತ್ಯದವರೆಗಿರುವ ಹನ್ನೊಂದು ಸಂಧಿಗಳಲ್ಲಿಯೂ ಒಂದೊಂದು ವೃತ್ತಗಳು ಇರುವುವು. ಹೀಗಾದಲ್ಲಿ ವೃತ್ತಗಳೆರಡಕ್ಕೆ ಮೂರಾದಂತಾಗುತ್ತದೆ. ಇದು ಶ್ರೀಮನ್ಮಹಾಲಕ್ಷ್ಮಿಯು, ಸಕಲ ದೇವತೆಗಳಿಂದ ಪ್ರಾದುರ್ಭವಿಸಿದ ತೇಜಸ್ಸಿನ ರೂಪವಾದ ಶ್ರೀಚಕ್ರವೆಂದಾಗುವುದು ॥ ೪೪ ॥ ಎಲೈ ಸ್ಕಂದನೆ! ಈ ಪ್ರಕಾರವಾಗಿ ಜ್ಯೋತಿರ್ಮಯ ಶ್ರೀಚಕ್ರವು ರಚಿಸಲ್ಪಡಲಿಕ್ಕೆ, ದೇವಿಯು ಬಹುಕಾಲ ಪರ್ಯಂತವಾಗಿ ಯುದ್ಧಮಾಡಿ ಮಹಿಷಾಸುರನನ್ನು ಸಂಹರಿಸಿದಳು ॥ ೪೫ ॥ ಈ ರೀತಿಯಾಗಿ ಹರಿಹರಾದಿ ಸಕಲ ದೇವತೆಗಳ ಮುಖದಿಂದ ಪ್ರಾದುರ್ಭವಿಸಿದವಳಾಗಿಯೂ, ಸಕಲ ದೈತ್ಯರ ಸಮೂಹವನ್ನು ಜಯಿಸಿದವಳಾಗಿಯೂ,

ಜಯಕ್ಷಮಸುಂದರೀ ॥ ೪೬ ॥ ಸುರಗಣಾರ್ಪಿತರತ್ನಲಸದ್ವರಾಭರಣ-
ವಸ್ತ್ರಸುಮಾವಲಿಭೂಷಿತಾ । ಕರಧೃತಾರಿದರಾಭಯದೇಷ್ಟದಾ ಹರಿ-
ಹರದ್ರುಹಿಣಾದಿಸಮರ್ಚಿತಾ ॥ ೪೭ ॥ ಅತಿಮುದಾನ್ವಿತದೈವತಸಂಸ್ತು-
ತಾ ಸ್ಮಿತಮುಖಾಂಬುರುಹಾ ಹರಿಸಂಸ್ಥಿತಾ । ಸ್ಮೃತಿಬಲಾದ್ವರದಾತ್ರ
ಸಮಾಗತಾ ಯತಿಪತಿಂ ಕಿಟಿಮೇನಮಭಾಷತ ॥ ೪೮ ॥ ಶ್ರೀದೇವೀ
ಉವಾಚ ॥ ಋಷೇ ವದ ಮಹಾಯೋಗಿನ್ಯತ್ತೇ ಮನಸಿ ವರ್ತತೇ ।
ತದಿಷ್ಟಮಿಹ ದಾಸ್ಯೇಽಹಂ ತವ ಧ್ಯಾನಾದ್ವಶೀಕೃತಾ ॥ ೪೯ ॥ ಋಷಿ-
ರುವಾಚ ॥ ದೇವೇಶಿ ಶ್ರೀಮಹಾಲಕ್ಷ್ಮಿ ಸರ್ವಚೈತನ್ಯರೂಪಿಣಿ ।
ತೇಜೋಮಯೇಽಸ್ಮಿನ್ ಶ್ರೀಚಕ್ರೇ ಶಿವೇನ ರಚಿತೇ ಶಿವೇ ॥ ೫೦ ॥
ನಿವಸ ತ್ವಂ ಹರೀಶಾದ್ಯೈಃ ಸಹಿತಾ ಪರಯಾ ಮುದಾ । ಸಾ ತ್ವಂ

---

ಲಕ್ಷಸೂರ್ಯರಂತೆ ಪ್ರಕಾಶವುಳ್ಳವಳಾಗಿಯೂ, ಸಹಸ್ರರತಿಯರನ್ನು ಜಯಿಸಲು ಸಮರ್ಥವಾದ ಸೌಂದರ್ಯವುಳ್ಳವಳಾಗಿಯೂ ॥ ೪೬ ॥ ದೇವತೆಗಳಿಂದ ಸಮರ್ಪಿಸಲ್ಪಟ್ಟ ರತ್ನಗಳಿಂದ ಝಗಝಗಿಪ ಕಿರೀಟ ತಾಟಂಕ ಹಾರಾದಿ ಭೂಷಣ, ಪೀತಾಂಬರ ಪುಷ್ಪಗಳ ಶ್ರೇಣಿಗಳಿಂದಲಂಕೃತಳಾಗಿಯೂ ಇರುವ ಶ್ರೀಮಹಾಲಕ್ಷ್ಮಿಯು, ನಾಲ್ಕು ಕೈಗಳಿಂದ ಚಕ್ರ, ಶಂಖ, ಅಭಯ, ವರದಗಳನ್ನು ಧರಿಸಿದವಳಾಗಿಯೂ, ಹರಿಹರಬ್ರಹ್ಮಾದಿಗಳಿಂದ ಪೂಜಿತಳಾಗಿಯೂ ॥ ೪೭ ॥ ಅತ್ಯಂತ ಸಂತೋಷಭರಿತರಾದ ದೇವತೆಗಳಿಂದ ಸಂಸ್ತುತಳಾಗಿಯೂ, ಕಿರುನಗೆಯುಳ್ಳ ಮುಖಕಮಲವುಳ್ಳವಳಾಗಿಯೂ, ಸಿಂಹವಾಹಿನಿಯಾಗಿಯೂ, ಕೋಲರ್ಷಿಯ ಧ್ಯಾನಬಲದಿಂದ ವರಗಳನ್ನು ಕೊಡುವವಳಾಗಿಯೂ, ಈ ಕೋಲಾಪುರಕ್ಷೇತ್ರಕ್ಕೆ ಬರುವವಳಾಗಿ ಯತಿಶ್ರೇಷ್ಠನಾದ ಈ ಕೋಲರ್ಷಿಯನ್ನು ಕುರಿತು ಹೇಳಿದಳು ॥ ೪೮ ॥ ಶ್ರೀದೇವಿಯು ಹೇಳಿದಳು— ಎಲೈ ಮಹಾಯೋಗಿಯಾದ ಕೋಲರ್ಷಿಯೆ! ನಿನ್ನ ಮನಸ್ಸಿನಲ್ಲೇನಿದೆ ಹೇಳು. ನಾನು ನಿನ್ನ ಧ್ಯಾನಸಾಮರ್ಥ್ಯದಿಂದ ನಿನ್ನಧೀನಳಾದ ಕಾರಣ ಆ ಅಭೀಷ್ಟವನ್ನೀಗ ಕೊಡುವೆನು ॥ ೪೯ ॥ ಕೋಲರ್ಷಿಯು ಹೇಳಿದನು— ಎಲೈ ಸಕಲ ಚೈತನ್ಯಸ್ವರೂಪಿಣಿಯಾಗಿಯೂ, ದೇವತೆಗಳಿಗೊಡತಿಯಾಗಿಯೂ ಇರುವ ಶ್ರೀಮಹಾಲಕ್ಷ್ಮಿಯೆ! ನೀನು, ಶಿವನಿಂದ ರಚಿಸಲ್ಪಟ್ಟ ಮಂಗಲಸ್ವರೂಪವಾದ ಈ ತೇಜೋಮಯ ಶ್ರೀಚಕ್ರದಲ್ಲಿ ॥ ೫೦ ॥ ಹರಿಹರಾದಿ ಸಮಸ್ತ ದೇವತೆಗಳಿಂದ ಸಹಿತಳಾಗಿ ಅತಿ ಸಂತೋಷದಿಂದ ವಾಸಮಾಡು.

ಮಯಾಽಽರಾಧನೀಯಾ ಚಿರಮಿತ್ಯೇವ ಮೇ ವರಃ ॥ ೫೧ ॥ ಈಶ್ವರ ಉವಾಚ ॥ ಇತಿ ವಿಜ್ಞಾಪಿತಾ ತೇನ ಶ್ರೀದೇವೀ ಲಿಂಗರೂಪಿಣೀ । ಉವಾಸ ಶ್ರೀಚಕ್ರಬಿಂದೌ ಯೇನ ವ್ಯಾಪ್ತಮಿದಂ ಜಗತ್ ॥ ೫೨ ॥ ಏವಮೇವಾತ್ರ ಯುಯುಜೇ ಹತ್ವಾ ವೇತ್ರಾಸುರಂ ಖಲಮ್ । ವಿಷ್ಣೋಃ ಸಕಾಶಾದುತ್ಪನ್ನಾ ಮಹಾಪೂರ್ವಾ ಹಿ ವೈಷ್ಣವೀ ॥ ೫೩ ॥ ವಿಷ್ಣುಮಾಯಾ ಯಶೋದಾಯಾಃ ಪುತ್ರೀ ಲೋಕವಿಮೋಹಿನೀ । ಕಂಸಾಯ ಶಾಪಂ ದತ್ವಾ ಸಾ ದುರ್ಗಾಽಪ್ಯತ್ರೈವ ಸಂಸ್ಥಿತಾ ॥ ೫೪ ॥ ಇತ್ಯತ್ರ ಶ್ರೀಮಹಾಲಕ್ಷ್ಮ್ಯಾ ನಿವಾಸಃ ಕಥಿತೋ ಮಯಾ । ಕ್ಷೇತ್ರಸಂಜ್ಞಾದಿಹೇತುಶ್ಚ ಶೃಣ್ವತಾಮಖಿಲಾರ್ಥದಃ ॥ ೫೫ ॥ ಇದಂ ಜ್ಯೋತಿರ್ಮಯಂ ಲಿಂಗಂ ಪುಂಪ್ರಕೃತ್ಯಾತ್ಮಕಂ ಮಹತ್ । ಅಹಮಾದಿಸುರಶ್ರೇಷ್ಠವೃಂದಮೂಲಾಲಯಂ ಮತಮ್ ॥ ೫೬ ॥ ಯಂ-

---

ಆ ಸರ್ವದೇವತಾಸ್ವರೂಪಿಣಿಯಾದ ನೀನು ಬಹುಕಾಲಪರ್ಯಂತವಾಗಿ ನನ್ನಿಂದ ಆರಾಧಿಸಲ್ಪಡತಕ್ಕವಳಾಗಬೇಕೆಂಬುದೇ ನನಗೆ ವರವಾಗಿದೆ ॥ ೫೧ ॥ ಈಶ್ವರನು ಹೇಳಿದನು— ಎಲೈ ಸ್ಕಂದನೆ! ಶ್ರೀಮಹಾಲಕ್ಷ್ಮಿಯು ಆ ಕೋಲ ಮಹರ್ಷಿಯಿಂದ ಈ ರೀತಿಯಾಗಿ ಪ್ರಾರ್ಥಿಸಲ್ಪಟ್ಟವಳಾಗಿ ಈ ಸಮಸ್ತ ಜಗತ್ತನ್ನು ವ್ಯಾಪಿಸಿರುವ ಲಿಂಗಾಕಾರವಾದ ತೇಜೋಮಯ ಶ್ರೀಚಕ್ರಬಿಂದುವಿನೊಳು ವಾಸಮಾಡಿದಳು ॥ ೫೨ ॥ ಹೀಗೆಯೇ ವಿಷ್ಣುವಿನ ದೆಸೆಯಿಂದ ಪ್ರಾದುರ್ಭವಿಸಿದ ಶ್ರೀಮಹಾವೈಷ್ಣವಿಯು ವೇತ್ರಾಸುರನೆಂಬ ದುಷ್ಟನನ್ನು ಕೊಂದು, ಈ ಶ್ರೀಚಕ್ರಬಿಂದುವೆಂಬ ಲಿಂಗದಲ್ಲಿಯೇ ಕೂಡಿರುವಳು ॥ ೫೩ ॥ ಜಗನ್ಮೋಹನರೂಪಿಣಿಯಾದ ವಿಷ್ಣುಮಾಯೆಯೆಂಬ ಯಶೋದಾಪುತ್ರಿ ದುರ್ಗೆಯೂ, ಕಂಸಾಸುರನಿಗೆ ಶಾಪವನ್ನು ಕೊಟ್ಟು, ಈ ಲಿಂಗದಲ್ಲಿಯೇ ವಾಸಮಾಡಿರುವಳು ॥ ೫೪ ॥ ಈ ಪ್ರಕಾರದಿಂದ ಕೋಲಾಪುರದಲ್ಲಿ ಶ್ರೀಮಹಾಲಕ್ಷ್ಮಿಯು ವಾಸಮಾಡಿರುವುದೂ, ಕೋಲಾಪುರವೆಂಬ ನಾಮಸಂಭವಾದಿಯ ಕಾರಣವೂ, ನನ್ನಿಂದ ಹೇಳಲ್ಪಟ್ಟಿತು. ಇದು ಕೇಳುವವರಿಗೂ ಓದುವವರಿಗೂ ಸಕಲ ಪುರುಷಾರ್ಥಗಳನ್ನು ಕೊಡುವುದಾಗಿದೆ ॥ ೫೫ ॥ ಈ ಜ್ಯೋತಿರ್ಮಯ ಲಿಂಗವು ಪ್ರಕೃತಿಪುರುಷಸ್ವರೂಪವಾಗಿರುವ ಕಾರಣದಿಂದ ನಾನೇ ಮೊದಲಾದ ಸಕಲ ದೇವತೆಗಳ ಸಮೂಹಕ್ಕೆ ಮೂಲಗೃಹವೆಂಬುದಾಗಿ ಸಮ್ಮತವಾಗಿದೆ ॥ ೫೬ ॥ ಎಲೈ ಸಜ್ಜನಶ್ರೇಷ್ಠನಾದ ಸ್ಕಂದನೆ! ಈ ಜ್ಯೋತಿರ್ಮಯ

**ಲ್ಲಿಂಗದರ್ಶನಸಮುತ್ಥಫಲಂ ಸಹಸ್ರಸಲ್ಲಿಂಗದರ್ಶನಸಮುತ್ಥಫಲೇನ ತುಲ್ಯಮ್ । ತತ್ಸಂಪ್ರತೀಹ ಸುತರಾಂ ಪ್ರಕಟೀಕೃತಂ ತೇ ವಿಜ್ಞೇಯ-ಮಸ್ತಿ ಕಿಮತಃ ಪರಮಾರ್ಯವರ್ಯ ॥ ೫೭ ॥ ಸ್ಕಂದ ಉವಾಚ ॥ ತಪಃ ಕುರ್ವನ್ಸ ಕಂಹಾಖ್ಯಃ ಕಿಂ ಚಕಾರ ಮಹಾಸುರಃ । ಕೇನ ವಾ ನಿಹತಸ್ತಾತ ವದ ಮೇ ಕರುಣಾಕರ ॥ ೫೮ ॥ ಈಶ್ವರ ಉವಾಚ ॥ ತಪಸ್ಯತಸ್ತಸ್ಯ ವೈವಸ್ವತಮನ್ವಂತರೇ ಪುನಃ । ಅಷ್ಟಾವಿಂಶತ್ತಮೇ ತತ್ರ ದ್ವಾಪರೇಽಹಂ ಸುತೋಷಿತಃ ॥ ೫೯ ॥ ಯಾವದ್ದದ್ಯಾಂ ಹಿ ಕಂಹಸ್ಯ ವರಾಂಸ್ತಾವದ್ಭಯಾತುರಾಃ । ದೇವಾಃ ಕೋಲಾಪುರಂ ಪ್ರಾಪ್ಯ ಮಹಾಲಕ್ಷ್ಮೀಂ ಪ್ರತುಷ್ಟುವುಃ ॥ ೬೦ ॥ ದೇವಾ ಊಚುಃ ॥ ನಮಸ್ತೇ ಜಗದ್ಧಾತ್ರಿ ಸದ್ಬ್ರಹ್ಮರೂಪೇ ನಮಸ್ತೇ ಹರೋಪೇಂದ್ರ-ಧಾತ್ರಾದಿವಂದ್ಯೇ । ನಮಸ್ತೇ ಪ್ರಪನ್ನೇಷ್ಟದಾನೈಕದಕ್ಷೇ ನಮಸ್ತೇ**

---

ಲಿಂಗವನ್ನೊಂದನ್ನು ಮಾತ್ರ ನೋಡೋಣದರಿಂದ ಸಹಸ್ರ ದಿವ್ಯಲಿಂಗಗಳನ್ನು ನೋಡೋಣದರ ಫಲವುಂಟಾಗುವುದು. ಅಂತಹ ಅತಿ ರಹಸ್ಯವಾದ ಲಿಂಗವು ಈಗ ನಿನಗೋಸ್ಕರ ಪ್ರಕಟಿಸಲ್ಪಟ್ಟಿತು. ಇದರಲ್ಲಿ ಇನ್ನು ತಿಳಿಯತಕ್ಕದ್ದೇನಿದೆ ॥ ॥ ೫೭ ॥ ಸ್ಕಂದನು ಹೇಳಿದನು— ಎಲೈ ದಯಾಳುವಾದ ತಂದೆಯೇ! ಆ ತಪಸ್ಸನ್ನು ಮಾಡುವ ಕಂಹನೆಂಬ ಮಹಾಸುರನು ಏನು ಮಾಡಿದನು. ಯಾರಿಂದ ಮರಣಹೊಂದಿದನೆಂಬುದನ್ನೂ ನನಗೆ ಹೇಳು ॥ ೫೮ ॥ ಈಶ್ವರನು ಹೇಳಿದನು—ಎಲೈ ಸ್ಕಂದನೆ! ಆ ತಪಸ್ಸುಮಾಡುವ ಕಂಹಾಸುರನಿಗೆ ವೈವಸ್ವತ ಮನ್ವಂತರದ ಇಪ್ಪತ್ತೆಂಟನೆಯ ದ್ವಾಪರದಲ್ಲಿ ಸಂತುಷ್ಟನಾಗಿ ಯಾವಾಗ ॥ ॥ ೫೯ ॥ ನಾನು ವರಗಳನ್ನು ಕೊಟ್ಟೆನೋ, ಆವಾಗ ಇಂದ್ರಾದಿ ದೇವತೆಗಳು ಭಯಪಟ್ಟವರಾಗಿ ಕೋಲಾಪುರವನ್ನಯ್ದಿ ಶ್ರೀಮಹಾಲಕ್ಷ್ಮಿಯನ್ನು ಸ್ತುತಿಸಿದರು ॥ ೬೦ ॥ ದೇವತೆಗಳು ಹೇಳಿದರು—ಜಗತ್ತಿಗೆ ತಾಯಿಯಾಗಿಯೂ ಪರಬ್ರಹ್ಮಸ್ವರೂಪಿಣಿಯಾಗಿಯೂ, ಶಿವ ವಿಷ್ಣು ಬ್ರಹ್ಮಾದಿಗಳಿಂದ ವಂದಿಸಿಕೊಳ್ಳತಕ್ಕವಳಾಗಿಯೂ, ಭಕ್ತಜನರ ಅಭೀಷ್ಟಗಳನ್ನು ಕೊಡುವುದರಲ್ಲತಿ ಸಮರ್ಥೆಯಾಗಿಯೂ ಇರುವ, ಎಲೈ ಕೋಲಾಪುರೇಶ್ವರಿಯಾದ ಮಹಾಲಕ್ಷ್ಮಿಯೆ! ನಿನಗೋಸ್ಕರ ನಮಸ್ಕಾರವು. ಹೀಗೆಯೇ ಈ ಸ್ತೋತ್ರದ ಪ್ರತಿ ಶ್ಲೋಕಗಳ ಕೊನೆಯಲ್ಲಿ, 'ಎಲೈ ಕೋಲಾಪುರೇಶ್ವರಿಯಾದ ಮಹಾಲಕ್ಷ್ಮಿಯೆ! ನಿನಗೋಸ್ಕರ ನಮಸ್ಕಾರವು' ಎಂದು ತಾತ್ಪರ್ಯದೊಡನೆ ಹೇಳ

ಮಹಾಲಕ್ಷ್ಮಿ ಕೋಲಾಪುರೇಶಿ ॥ ೬೧ ॥ ವಿಧಿಃ ಕೃತ್ತಿವಾಸಾ ಹರಿರ್ವಿಶ್ವಮೇತತ್ಸೃಜತ್ಯತ್ತಿ ಪಾತೀತಿ ಯತ್ತತ್ಪ್ರಸಿದ್ಧಮ್ । ಕೃಪಾಲೋಕನಾದೇವ ತೇ ಶಕ್ತಿರೂಪೇ ನಮಸ್ತೇ ಮಹಾಲಕ್ಷ್ಮಿ ಕೋಲಾಪುರೇಶಿ ॥ ॥ ೬೨ ॥ ತ್ವಯಾ ಮಾಯಯಾ ವ್ಯಾಪ್ತಮೇತತ್ಸಮಸ್ತಂ ಧೃತಂ ಲೀಲಯಾ ದೇವಿ ಕುಕ್ಷೌ ಹಿ ವಿಶ್ವಮ್ । ಸ್ಥಿತಂ ಬುದ್ಧಿರೂಪೇಣ ಸರ್ವತ್ರ ಜಂತೌ ನಮಸ್ತೇ ಮಹಾಲಕ್ಷ್ಮಿ ಕೋಲಾಪುರೇಶಿ ॥ ೬೩ ॥ ಯಯಾ ಭಕ್ತವರ್ಗಾ ಹಿ ಲಕ್ಷ್ಯಂತ ಏತೇ ತ್ವಯಾತ್ರ ಪ್ರಕಾಮಂ ಕೃಪಾಪೂರ್ಣದೃಷ್ಟ್ಯಾ । ಅತೋ ಗೀಯಸೇ ದೇವಿ ಲಕ್ಷ್ಮೀರಿತಿ ತ್ವಂ ನಮಸ್ತೇ ಮಹಾಲಕ್ಷ್ಮಿ ಕೋಲಾಪುರೇಶಿ ॥ ೬೪ ॥ ಪುನರ್ವಾಕ್ಪಟುತ್ವಾದಿಹೀನಾ ಹಿ ಮೂಕಾ ನರೈಸ್ತೈರ್ನಿಕಾಮಂ ಖಲು ಪ್ರಾರ್ಥ್ಯಸೇ ಯತ್ । ನಿಜೇಷ್ಟಾಪ್ತಯೇ ಹಂತ ಮೂಕಾಂಬಿಕಾ ತ್ವಂ ನಮಸ್ತೇ ಮಹಾಲಕ್ಷ್ಮಿ ಕೋಲಾಪುರೇಶಿ ॥ ೬೫ ॥ ಯದದ್ವೈತರೂಪಾತ್ಪರಬ್ರಹ್ಮಣಸ್ತ್ವಂ ಸಮುತ್ಥಾ ಪುನರ್ವಿಶ್ವಲೀಲೋದ್ಯಮಸ್ಥಾ । ತದಾ-

---

ತಕ್ಕದ್ದು ॥ ೬೧ ॥ ಈ ಜಗತ್ತನ್ನು ಬ್ರಹ್ಮನು ಸೃಷ್ಟಿಸುವನು, ಶಿವನು ಸಂಹರಿಸುವನು, ವಿಷ್ಣುವು ಪಾಲಿಸುವನು, ಇಂತೆನ್ನುವುದಾವುದುಂಟೋ, ಅದು ನೀನು ಶಕ್ತಿಸ್ವರೂಪಿಣಿಯಾದ್ದರಿಂದ ನಿನ್ನ ಕೃಪಾಕಟಾಕ್ಷದ ದೆಸೆಯಿಂದಲೇ ಪ್ರಸಿದ್ಧವಾಗಿದೆ ॥ ೬೨ ॥ ಎಲೈ ದೇವಿಯೆ! ಈ ಸಮಸ್ತ ಜಗತ್ತೂ ನಿನ್ನಿಂದ ಮಾಯಾರೂಪದಿಂದ ವ್ಯಾಪಿಸಲ್ಪಟ್ಟಿದೆ. ಲೀಲೆಯಿಂದ ಉದರದಲ್ಲಿ ಧರಿಸಲ್ಪಟ್ಟದ್ದೂ ಆಗಿದೆ. ಬುದ್ಧಿರೂಪದಿಂದ ಸಕಲ ಪ್ರಾಣಿಗಳಲ್ಲಿಯೂ ಇರೋಣಾಗಿದೆ. ಆಶ್ಚರ್ಯ! ॥ ೬೩ ॥ ಯಾವ ನಿನ್ನಿಂದ ಈ ಮಹಾಕ್ಷೇತ್ರದಲ್ಲಿ ಭಕ್ತಜನಸಮೂಹವು ಕೃಪೆಯಿಂದ ಭರಿತವಾದ ದೃಷ್ಟಿಯಿಂದ ಹೆಚ್ಚಾಗಿ ಲಕ್ಷಿಸಲ್ಪಡುವುದೋ (ನೋಡಲ್ಪಡುವುದೋ), ಎಲೈ ದೇವಿಯೆ! ಆದುದರಿಂದ ನೀನು ಲಕ್ಷ್ಮಿಯೆಂದು ಹೇಳಲ್ಪಡುತ್ತೀಯೆ ॥ ೬೪ ॥ ಮತ್ತು ಮಾತಿನ ಧೀರತ್ವ ಶ್ರೋತೃತ್ವ ರಮಣೀಯತ್ವ ಸತ್ಯತ್ವಗಳಿಲ್ಲದವರು ಮೂಕರೇ ಸರಿಯಷ್ಟೆ. ಅಂತಹ ಮೂಕಜನರಿಂದ ತಮ್ಮ ಅಭೀಷ್ಟಸಿದ್ಧಿಗೋಸ್ಕರ ನೀನು ಬಹಳವಾಗಿ ಪ್ರಾರ್ಥಿಸಲ್ಪಡುವುದರಿಂದ ಮೂಕಾಂಬಿಕೆಯೆಂದೂ ಹೇಳಲ್ಪಡುತ್ತೀಯೆ॥೬೫॥ ನೀನು ಏಕಸ್ವರೂಪವಾದ ಪರಬ್ರಹ್ಮದ ದೆಸೆಯಿಂದ ಪ್ರಾದುರ್ಭವಿಸಿದವಳಾಗಿಯೂ, ಪುನಃ ಜಗತ್ತಿನ ಸೃಷ್ಟಿಸ್ಥಿತಿಲಯಗಳೆಂಬ ಕ್ರೀಡೆ ಉದ್ಯೋಗಗಳಲ್ಲಿ

**ಹುರ್ಜನಾಸ್ತ್ವಾಂ ಹಿ ಗೌರೀಂ ಕುಮಾರೀಂ ನಮಸ್ತೇ ಮಹಾಲಕ್ಷ್ಮಿ ಕೋಲಾಪುರೇಶಿ ॥ ೬೬ ॥ ಹರೀಶಾದಿದೇಹೋತ್ಥ ತೇಜೋಮಯಪ್ರ-ಸ್ಫುರಚ್ಚಕ್ರರಾಜಾಖ್ಯಲಿಂಗಸ್ವರೂಪೇ । ಮಹಾಯೋಗಿಕೋಲರ್ಷಿ-ಹೃತ್ಪದ್ಮಗೇಹೇ ನಮಸ್ತೇ ಮಹಾಲಕ್ಷ್ಮಿ ಕೋಲಾಪುರೇಶಿ ॥ ೬೭ ॥ ನಮಃ ಶಂಖಚಕ್ರಾಭಯಾಭೀಷ್ಟಹಸ್ತೇ ನಮಸ್ತೇಽಂಬಿಕೇ ಗೌರಿ ಪದ್ಮಾಸನಸ್ಥೇ । ನಮಃ ಸ್ವರ್ಣವರ್ಣೇ ಪ್ರಸನ್ನೇ ಶರಣ್ಯೇ ನಮಸ್ತೇ ಮಹಾಲಕ್ಷ್ಮಿ ಕೋಲಾಪುರೇಶಿ ॥ ೬೮ ॥ ಇದಂ ಸ್ತೋತ್ರರತ್ನಂ ಕೃತಂ ಸರ್ವದೇವೈರ್ಹೃದಿ ತ್ವಾಂ ಸಮಾಧಾಯ ಲಕ್ಷ್ಮ್ಯಷ್ಟಕಂ ಯಃ । ಪಠೇನ್ನಿತ್ಯಮೇಷ ವ್ರಜತ್ಯಾಶು ಲಕ್ಷ್ಮೀಂ ಸುವಿದ್ಯಾಂ ಚ ಸತ್ಯಂ ಭವ-ತ್ಯಾಃ ಪ್ರಸಾದಾತ್ ॥ ೬೯ ॥ ಈಶ್ವರ ಉವಾಚ ॥ ಇತಿ ಸ್ತುತಾ ಮಹಾ-ಲಕ್ಷ್ಮೀಃ ಶ್ರೀಮತ್ಕೋಲಾಪುರೇಶ್ವರೀ । ಸ್ತೋತ್ರೇಣಾನೇನ ಸಂತು-**

---

ಆಸಕ್ತಳಾಗಿಯೂ ಇರುವವಳಾದ್ದರಿಂದ ನಿನ್ನನ್ನು ಗೌರಿಯೆಂತಲೂ, ಕುಮಾರಿಯೆಂತಲೂ, ಜನರು ಹೇಳುವರು ॥ ೬೬ ॥ ಹರಿಹರಾದಿ ಸಮಸ್ತ ದೇವತೆಗಳ ಶರೀರದದೆಸೆಯಿಂದ ಪ್ರಾದುರ್ಭವಿಸಿದ ತೇಜಸ್ಸಿನ ರೂಪವಾಗಿ ಪ್ರಜ್ವಲಿಸುವ ಶ್ರೀಚಕ್ರವೆಂಬ ಲಿಂಗದ ರೂಪವುಳ್ಳವಳಾಗಿಯೂ, ಮಹಾಯೋಗಿಯಾದ ಕೋಲರ್ಷಿಯ ಹೃದಯವೆಂಬ ಕಮಲವೇ ಮನೆಯಾಗಿಯುಳ್ಳ, ॥ ೬೭ ॥ ನಾಲ್ಕು ಕೈಗಳಲ್ಲಿ ಶಂಖ, ಚಕ್ರ, ಅಭಯವರದಗಳುಳ್ಳವಳಾಗಿಯೂ, ಮೂರು ಕಣ್ಣುಗಳುಳ್ಳವಳಾಗಿಯೂ, ಪ್ರಾರಂಭಮಾತ್ರವಾಗಿರುವ ಯೌವನವುಳ್ಳವಳಾಗಿಯೂ, ಪದ್ಮಾಸನದಲ್ಲಿ ಕುಳಿತಿರುವಳಾಗಿಯೂ, ಭಂಗಾರದಂತೆ ಶರೀರದ ವರ್ಣವುಳ್ಳವಳಾಗಿಯೂ, ಶಾಂತಳಾಗಿಯೂ, ಭಕ್ತರನ್ನು ರಕ್ಷಿಸತಕ್ಕವಳಾಗಿಯೂ, ಇರುವ ಎಲೈ ಕೋಲಾಪುರೇಶ್ವರಿಯಾದ ಮಹಾಲಕ್ಷ್ಮಿಯೇ! ನಿನಗೋಸ್ಕರ ನಮಸ್ಕಾರ ॥ ೬೮ ॥ ಎಲೈ ದೇವಿಯೆ! ಯಾವನು ನಿನ್ನನ್ನು ಹೃದಯದಲ್ಲಿಟ್ಟುಕೊಂಡು ಸಕಲ ದೇವತೆಗಳೆಂಬ ನಮ್ಮಿಂದ ರಚಿಸಲ್ಪಟ್ಟ ಈ ಸ್ತೋತ್ರಶ್ರೇಷ್ಠವಾದ ಕೋಲಾಪುರಮಹಾಲಕ್ಷ್ಮ್ಯಷ್ಟಕವನ್ನು ನಿತ್ಯವೂ ಪಠಿಸುವನೋ, ಈ ಮನುಷ್ಯನು ಶೀಘ್ರದಿಂದ ಐಶ್ವರ್ಯವನ್ನೂ ಬ್ರಹ್ಮವಿದ್ಯೆಯನ್ನೂ, ನಿನ್ನ ಅನುಗ್ರಹದದೆಸೆಯಿಂದ ಸತ್ಯವಾಗಿ ಪಡೆಯುವನು ॥ ೬೯ ॥ ಈಶ್ವರನು ಹೇಳಿದನು— ಎಲೈ ಸ್ಕಂದನೇ! ಸಂಪದ್ವಿಶಿಷ್ಟವಾದ ಕೋಲಾಪುರಕ್ಕೊಡತಿಯಾದ ಮಹಾಲಕ್ಷ್ಮಿಯು, ಈ ರೀತಿಯಿಂದ ಸ್ತುತಿಸಲ್ಪಡಲಿಕ್ಕೆ

ಷ್ಟ್ವಾ ಪ್ರತ್ಯಕ್ಷಂ ಪ್ರಾಹ ತಾನ್ಸುರಾನ್ ॥ ೭೦ ॥ ಶ್ರೀದೇವ್ಯುವಾಚ ॥ ದೇವಾಃ ಕಿಮರ್ಥಮಾಗತ್ಯ ಸ್ತುವಂತೋಽತ್ರ ಭಯಾತುರಾಃ । ಯೂಯಂ ತದ್ವದತೇದಾನೀಂ ಕರಿಷ್ಯೇ ಯುಷ್ಮದೀಪ್ಸಿತಮ್ ॥ ೭೧ ॥ ದೇವಾ ಊಚುಃ ॥ ದೇವಿ ಕಂಹಾಸುರೋ ನಾಮ ಸರ್ವಪ್ರಾಣಿಭಯಂಕರಃ । ತಪಃ ಕುರ್ವನ್ಸುಪ್ರಸನ್ನಾದೀಶಾಲ್ಲಬ್ಧವರೋ ಯದಿ ॥ ॥೭೨॥ ತದಾ ಸರ್ವೈರವಧ್ಯಃ ಸ್ಯಾದತಸ್ತ್ವಮಧುನಾಽಂಬಿಕೇ । ಯದಾ ನ ವರಯೇದಿಷ್ಟಾಂಸ್ತಥೈವ ಕುರು ತಂ ದ್ರುತಮ್ ॥ ೭೩ ॥ ಈಶ್ವರ ಉವಾಚ ॥ ಇತಿ ಪ್ರಾರ್ಥಿತಾಽಸೌ ಸುರೌಘೈರವಾಚಂ ಚಕಾರ ಕ್ಷಣಾದೇವ ಕಂಹಂ ಯತೋಽತಃ । ತದಾರಭ್ಯ ಲಕ್ಷ್ಮೀಸ್ತು ಮೂಕಾಂಬಿಕೇತಿ ಪ್ರಸಿದ್ಧಾ ವಿಶೇಷಾತ್ಸ ಮೂಕಾಸುರಶ್ಚ ॥ ೭೪ ॥ ಕದಾಚಿತ್ ಕ್ಷಿತೌ ಕ್ಷೀಯತೇ ದೇವತಾನಾಂ ಪ್ರಭಾವಃ ಕದಾಚಿತ್ತಥಾ ವರ್ಧತೇ ಚ । ಅತಃ ಕಾಲವೈಚಿತ್ರ್ಯತೋಽಸ್ಮಿನ್ ಸ್ಥಲೇಽಪಿ ಕ್ವಚಿತ್ತಚ್ಛಿದುಲ್ಲಾ-

---

ಈ ಸ್ತೋತ್ರದಿಂದ ಸಂತುಷ್ಟಳಾಗಿ ಆ ದೇವತೆಗಳನ್ನು ಕುರಿತು ಪ್ರತ್ಯಕ್ಷವಾಗಿ ಹೇಳುವಳು ॥ ೭೦ ॥ ಎಲೈ ದೇವತೆಗಳಿರಾ! ನೀವು ಏತಕ್ಕೋಸ್ಕರ ಭಯ ಗ್ರಸ್ತರಾಗಿ ಇಲ್ಲಿ ಬಂದು ಸ್ತುತಿಸುವಿರೆಂಬುದನ್ನೀಗ ಹೇಳಿರಿ. ನಿಮ್ಮ ಅಭೀಷ್ಟ ವನ್ನು ಮಾಡಿಕೊಡುವೆನು ॥ ೭೧ ॥ ದೇವತೆಗಳು ಹೇಳಿದರು— ಎಲೈ ತಾಯಿಯೆ! ಸಮಸ್ತ ಪ್ರಾಣಿಗಳಿಗೂ ಭಯವನ್ನುಂಟುಮಾಡುವ ಕಂಹಾಸುರ ನೆಂಬವನು ತಪಸ್ಸುಮಾಡುವನು. ಆತನು ಸಂತುಷ್ಟನಾದ ಶಿವನ ದೆಸೆಯಿಂದ ವರಗಳನ್ನು ಪಡೆದರೆ ॥ ೭೨ ॥ ಆಗ ಯಾರಿಂದಲೂ ಮರಣಹೊಂದನು. ಆದುದರಿಂದ ಈಗ ಆತನನ್ನು ನೀನು ವರಗಳನ್ನು ಬೇಡದಂತೆ ಬೇಗನೆ ಮಾಡು ॥ ೭೩ ॥ ಈಶ್ವರನು ಹೇಳಿದನು— ಎಲೈ ಸ್ಕಂದನೆ! ಈ ರೀತಿಯಿಂದ ದೇವಗಣಗಳಿಂದ ಪ್ರಾರ್ಥಿಸಲ್ಪಡಲಿಕ್ಕೆ ಆ ಕ್ಷಣದಲ್ಲಿಯೇ ಕಂಹಾಸುರನನ್ನು ಮಾತಿಲ್ಲದವನನ್ನಾಗಿ ಮಾಡಿದ್ದರಿಂದ ಈ ಮಹಾಲಕ್ಷ್ಮಿಯು ಆ ಮೊದಲು ಗೊಂಡು ವಿಶೇಷವಾಗಿ ಮೂಕಾಂಬಿಕೆಯೆಂದು ಪ್ರಸಿದ್ಧಳಾದಳು. ಕಂಹಾ ಸುರನೂ ಮೂಕಾಸುರನಂತಾದನು ॥ ೭೪ ॥ ಭೂಮಿಯಲ್ಲಿ ವಿಷ್ಣ್ವಾದಿ ದೇವತೆಗಳ ಪ್ರತಾಪವು, ಒಂದು ಕಾಲದಲ್ಲಿ ಕ್ಷೀಣಹೊಂದುತ್ತಿರುವುದು, ಹಾಗೆ ಮತ್ತೊಂದು ಕಾಲದಲ್ಲಿ ವೃದ್ಧಿಹೊಂದುತ್ತಿರುವುದು. ಆದ್ದರಿಂದಲೂ, ಕಾಲಗತಿಯು ಆಶ್ಚರ್ಯಕರವಾದ್ದರಿಂದಲೂ, ಈ ಕೋಲಾಪುರದಲ್ಲಿ ಅಕ್ಷಯ

ಸತಾವ್ಯಸ್ತಕಾಲೇ ॥ ೭೫ ॥ ಅಥಾಲಬ್ಧಕಾಮೋ ವೃಥಾ ಲಬ್ಧಖೇದೋ ಯತೋಽನಲ್ಪಕ್ರೋಧೋಽತ್ರ ಮೂಕಾಸುರೋಽಸೌ । ಸಮಾಗತ್ಯ ಸರ್ವಂ ಜಗತ್ಪೀಡಯನ್ಸಂಚಚಾರಾಥ ದೇವೈಃ ಸ್ತುತಾ ಪಾರ್ವತೀ ಸಾ ॥ ॥ ೭೬ ॥ ತತೋ ವೀರಭದ್ರೇಭವಕ್ತ್ರಾದಿಯುಕ್ತಾ ಸಮಂ ಸ್ವಪ್ರಿಯೇಣಾಪಿ ಕೋಲಾಪುರೇಽಸ್ಮಿನ್ । ನಿಯುಧ್ಯಾಮುನಾಽನೇಕಧಾ ಜ್ಯೇಷ್ಠಮಾಸೇ ವಳಕ್ಷೇ ಚ ಪಕ್ಷೇಽಷ್ಟಮೀಮಧ್ಯರಾತ್ರೇ ॥ ೭೭ ॥ ಶಿರಃ ಖಂಡಯಿತ್ವಾಽರಿಣಾ ತಸ್ಯ ಮೂಕಾಸುರಸ್ಯಾಥ ನಾಥೇನ ಸಾರ್ಧಂ ಭವಾನೀ । ಮುದಾಖಂಡಸಚ್ಚಿತ್ಸುಖಬ್ರಹ್ಮಲಿಂಗಂ ಮಹಚ್ಚಕ್ರಬಿಂದ್ವಾತ್ಮಕಂ ತದ್ಯುಯೋಜ ॥ ೭೮ ॥ ಇತಿ ಸರ್ವಂ ಸಮಾಖ್ಯಾತಂ ಮೂಕಾಸುರವಧಾಶ್ರಿತಮ್ । ಮೂಕಾಂಬಿಕೇತಿ ನಾಮ್ನೋಽಪಿ ಕಾರಣಂ ಪುಣ್ಯಕಾರಣಮ್ ॥ ೭೯ ॥ ಯಾ ಹತ್ವಾ ಮಹಿಷಾಸುರಂ ಶಿವಕೃತಶ್ರೀಚಕ್ರಬಿಂದ್ವಾತ್ಮಕಂ ಯದ್ವಾ ಹಾರಿವಧೋತ್ಸುಕಾಮರಜ-

---

ವೃದ್ಧಿಯುಳ್ಳ ಚಿತ್ರಭಾವದ ಇಳಿಯುವಿಕೆಯು ಒಂದಾನೊಂದು ಕಾಲದಲ್ಲಿ ॥ ೭೫ ॥ ಈ ಮೂಕಾಸುರನು ತಾನು ಅಭೀಷ್ಟಗಳನ್ನು ಪಡೆಯದಿರುವನಾದುದರಿಂದಲೂ, ವ್ಯರ್ಥವಾಗಿ ಕಷ್ಟಹೊಂದಿದವನಾದುದರಿಂದಲೂ, ಬಹಳ ಕ್ರೋಧವುಳ್ಳವನಾಗಿ ಇಲ್ಲಿ ಬಂದು ಬಳಿಕ ಸಮಸ್ತ ಲೋಕವನ್ನು ಪೀಡಿಸುವವನಾಗಿ ಸಂಚರಿಸಿದನು. ಆದುದರಿಂದ ದೇವತೆಗಳು ಪಾರ್ವತೀದೇವಿಯನ್ನು ಸ್ತುತಿಸಲಾಗ ಅವಳು ॥ ೭೬ ॥ ವೀರಭದ್ರ ಗಣಪತಿ ಮೊದಲಾದ ಗಣಗಳಿಂದಲೂ, ತನ್ನ ಪ್ರಿಯನಾದ ಶಿವನಿಂದಲೂ ಸಮೇತಳಾಗಿ ಕೋಲಾಪುರದಲ್ಲಿ ಇವನೊಡನೆ ಬಹಳವಾಗಿ ಯುದ್ಧಮಾಡಿ ಜ್ಯೇಷ್ಠಶುಕ್ಲಾಷ್ಟಮೀದಿನದ ಮಧ್ಯರಾತ್ರಿಯಲ್ಲಿ ॥ ೭೭ ॥ ಚಕ್ರದಿಂದ ಆ ಮೂಕಾಸುರನ ಶಿರಸ್ಸನ್ನು ಕತ್ತರಿಸಿ ಬಳಿಕ ಆ ಭವಾನಿಯು ಶಿವನಿಂದ ಸಹಿತಳಾಗಿ ಸಂತೋಷದಿಂದ ತೇಜೋಮಯ ಶ್ರೀಚಕ್ರಬಿಂದುರೂಪವಾದ ಅಖಂಡ ಸಚ್ಚಿದಾನಂದಪರಬ್ರಹ್ಮಸ್ವರೂಪಲಿಂಗವನ್ನು ಕೂಡಿದಳು ॥ ೭೮ ॥ ಈ ಪ್ರಕಾರದಿಂದ ಮೂಕಾಸುರನ ವಧೆಯಿಂದ ಸಮೇತವಾದ ಸಕಲವೂ ಮೂಕಾಂಬಿಕೆಯೆಂಬ ನಾಮದ ಪ್ರಾಪ್ತೀಕರಣವೂ ಸರಿಯಾಗಿ ಹೇಳಲ್ಪಟ್ಟಿತು. ಇದು ಕೇಳುವವರಿಗೂ, ಹೇಳುವವರಿಗೂ, ಪುಣ್ಯಸಂಪಾದನೆಗೆ ಕಾರಣವಾಗಿದೆ ॥ ೭೯ ॥ ಯಾವ ದೇವಿಯು ಮಹಿಷಾಸುರನನ್ನು ಸಂಹರಿಸಿ, ಜಗತ್ತಿನ ಶ್ರೇಯಸ್ಸಿಗೋಸ್ಕರ ಶಿವನಿಂದ ರಚಿಸಲ್ಪಟ್ಟ

ತೇಜೋಲಿಂಗಮೋತನ್ಮಯೀ । ಶ್ರೀಕೋಲಾಪುರಮಾಶ್ರಿತಾ ಖಲು ಮಹಾಲಕ್ಷ್ಮೀರ್ಜಗದ್ಭೂತಯೇ ಸಾ ದೇವೀ ತ್ರಿಗುಣಾಶ್ರಿತಾವನ-ರತಾ ಮಾಕಾಂಬಿಕಾ ಪಾತು ನಃ ॥ ೮೦ ॥

ಇತಿ ಸ್ಕಾಂದೇ ಶ್ರೀಕೋಲಾಪುರಕ್ಷೇತ್ರಮಾಹಾತ್ಮ್ಯೇ ದೇವೀನಿವಾಸನಿರೂಪಣಂ ನಾಮ ಪ್ರಥಮೋಽಧ್ಯಾಯಃ ॥ ೧ ॥

---

## ಅಥ ದ್ವಿತೀಯೋಽಧ್ಯಾಯಃ

ಶ್ರೀಸ್ಕಂದ ಉವಾಚ ॥ ದೇವೇಶ ಭಗವನ್ನತ್ರ ಶ್ರೀದೇವ್ಯಾ ಅರ್ಚನಕ್ರಮಮ್ । ಕೈಃ ಕೈಃ ಪುರಾಽರ್ಚಿತಾ ಸೇಯಮಿತ್ಯೇತಚ್ಚ ವದಸ್ವ ಮೇ ॥ ೧ ॥ ಈಶ್ವರ ಉವಾಚ ॥ ಆಕರ್ಣಯಾಗ್ನಿಭೂಃ ಪೂರ್ವಂ ಭಗವಾನ್ ಕಮಲಾಪತಿಃ । ದೇವೇಂದ್ರಾಯ ಯದಾಹಾದ್ಯ ತದೇವ ಕಥಯಾಮ್ಯಹಮ್ ॥ ೨ ॥ ಕದಾಚಿದಮರಾವತ್ಯಾಂ ಮೋ-

---

ಶ್ರೀಚಕ್ರಬಿಂದುಸ್ವರೂಪವಾದ, ಆ ಮಹಿಷನ ವಧೆಯಲ್ಲಿ ಉದ್ಯುಕ್ತರಾದ ವಿಷ್ಣ್ವಾದಿ ದೇವತೆಗಳ ದೆಸೆಯಿಂದ ಪ್ರಾದುರ್ಭವಿಸಿದ ತೇಜಸ್ಸಿನಮಯ ವಾದ ಲಿಂಗದ ರೂಪವುಳ್ಳವಳಾಗಿ ಕೋಲಾಪುರಕ್ಷೇತ್ರವನ್ನಾಶ್ರಯಿಸಿದವ ಳಾಗಿಯೂ, ತ್ರಿಗುಣಾತ್ಮಿಕೆಯಾಗಿಯೂ, ಭಕ್ತರ ಸಂರಕ್ಷಣೆಯಲ್ಲಿ ಆಸಕ್ತ ಳಾಗಿಯೂ, ಮಾಕಾಂಬಿಕೆಯೆಂಬ ನಾಮವುಳ್ಳವಳಾಗಿಯೂ ಇರುವಳೋ, ಆ ಮಹಾಲಕ್ಷ್ಮಿಯು ನಮ್ಮನ್ನು ಪಾಲಿಸಲಿ ॥ ೮೦ ॥

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತ ಶ್ರೀಕೋಲಾಪುರಕ್ಷೇತ್ರಮಾಹಾತ್ಮ್ಯದಲ್ಲಿ ಮೊದಲನೆಯ ಅಧ್ಯಾಯವು ಮುಗಿದುದು

---

ಸ್ಕಂದನು ಹೇಳಿದನು— ಎಲೈ ಭಗವಂತನಾದ ದೇವೇಶನೆ! ಈ ಕ್ಷೇತ್ರ ದಲ್ಲಿ ದೇವಿಯ ಪೂಜಾಕ್ರಮವನ್ನೂ, ಹಿಂದೇ ದೇವಿಯು ಯಾರಾರಿಂದ ಪೂಜಿ ಸಲ್ಪಟ್ಟಿರುವಳೆಂಬುದನ್ನೂ ನನಗೆ ಹೇಳು ॥ ೧ ॥ ಈಶ್ವರನು ಹೇಳಿದನು— ಎಲೈ ಸ್ಕಂದನೆ! ಕೇಳು. ಪೂರ್ವದಲ್ಲಿ ಷಡ್ಗುಣೈಶ್ವರ್ಯಸಂಪನ್ನನಾದ ಲಕ್ಷ್ಮೀಪತಿಯು ಇಂದ್ರನಿಗೋಸ್ಕರ ಹೇಳಿದ್ದಾವುದಿರುವುದೋ ಈಗ ಅದನ್ನೇ

ಹಿನೀ ರೂಪಭೃದ್ಧರಿಃ । ಹತ್ವಾ ವ್ಯಾಲಾಸುರಂ ನಾಮ ಘೋರದೈತ್ಯಂ ಸುರೈಃಸ್ತುತಃ ॥ ೩ ॥ ತದಾ ಶಕ್ರಃ ಸಹಸ್ರಾಕ್ಷೋ ದೃಷ್ಟ್ವಾ ಸ್ತ್ರೀ-ರೂಪಧಾರಿಣಮ್ । ವಿಷ್ಣುಂ ನತ್ವಾಽಥ ಪಪ್ರಚ್ಛ ವಿಸ್ಮಯೋತ್ಫುಲ್ಲ-ಲೋಚನಃ ॥ ೪ ॥ ಇಂದ್ರ ಉವಾಚ ॥ ಹರೇ ತ್ವಮಪ್ರಮೇಯೋಽಪಿ ಮನೋವಾಚಾಮಗೋಚರಃ । ಸ ತ್ವಂ ಪುರುಷರೂಪೋಽಸೀತ್ಯಾ-ಹುರ್ಲೋಕೇ ಮಹರ್ಷಯಃ ॥ ೫ ॥ ಇದಾನೀಮನ್ಯಥಾ ಭಾಸಿ ಸ ಕಥಂ ಪುರುಷೋತ್ತಮ । ಸ್ತ್ರೀ ವಾ ತ್ವಂ ಪುರುಷೋ ವೇತಿ ತತ್ತ್ವಂ ಕಥಯ ಮೇ ಪ್ರಭೋ ॥ ೬ ॥ ಶ್ರೀಭಗವಾನುವಾಚ ॥ ಪ್ರಕೃತಿಃ ಪುರುಷಶ್ಚೇತಿ ನಿತ್ಯೌ ತೌ ಯನ್ಮಯಂ ಜಗತ್ । ನ ಕದಾಚಿದ್ವಿಯು-ಕ್ತೌ ದ್ವೌ ಸುವರ್ಣಾಭರಣೇ ಯಥಾ ॥ ೭ ॥ ತಥಾಽಪಿ ತಜ್ಜ್ಞಾ ಮಾಂ ತಂ ಹಿ ಶಕ್ತಿತಾದಾತ್ಮ್ಯಗಂ ವಿದುಃ । ಅತಃ ಸ್ತ್ರೀಪುರುಷಶ್ಚೇತಿ ದ್ವಿಧಾ-

---

ನಾನು ಹೇಳುವೆನು ॥ ೨ ॥ ಒಂದಾನೊಂದು ಕಾಲದಲ್ಲಿ ಅಮರಾವತೀಪಟ್ಟಣದಲ್ಲಿ ವಿಷ್ಣುವು, ಮೋಹಿನೀರೂಪವನ್ನು ಧರಿಸಿದವನಾಗಿ ವ್ಯಾಳಾಸುರನೆಂಬ ಭಯಂಕರನಾದ ದೈತ್ಯನನ್ನು ಕೊಂದು ದೇವತೆಗಳಿಂದ ಸ್ತುತಿಸಲ್ಪಟ್ಟನು ॥ ೩ ॥ ಆಗ ಸಾವಿರ ಕಣ್ಣುಗಳುಳ್ಳ ಇಂದ್ರನು, ಸ್ತ್ರೀವೇಷಧಾರಿಯಾದ ವಿಷ್ಣುವನ್ನು ಕಂಡು ನಮಿಸಿ ಬಳಿಕ ಸಂಭ್ರಮದಿಂದ ಎವೆಬಿಡದ ನೇತ್ರಗಳುಳ್ಳವನಾಗಿ ಕೇಳಿದನು ॥ ೪ ॥ ಎಲೈ ಹರಿಯೆ! ನೀನು ಅಳೆಯಲಶಕ್ಯವಾದ ಮಹಿಮೆಯುಳ್ಳವನಾದರೂ, ಮನಸ್ಸಿಗೂ ವಚನಕ್ಕೂ ಅಗೋಚರನಾದರೂ, ಅಂಥಾ ನೀನು ಪುರುಷರೂಪನಾಗಿರುವೆಯೆಂದು ಲೋಕದಲ್ಲಿ ಮಹರ್ಷಿಗಳು ಹೇಳುವರು ॥ ೫ ॥ ಎಲೈ ಪುರುಷೋತ್ತಮನೆ! ಅಂಥಾ ನೀನು ಈಗ ಹೇಗೆ ವಿಪರೀತನಾಗಿ ತೋರುತ್ತೀಯೋ, ಎಲೈ ಸ್ವಾಮಿಯೆ, ನೀನು ಸ್ತ್ರೀಯೊ, ಪುರುಷನೊ, ಎಂದು ಪರಮಾರ್ಥವನ್ನು ನನಗೆ ಹೇಳು ॥ ೬ ॥ ವಿಷ್ಣುವು ಹೇಳಿದನು— ಎಲೈ ಇಂದ್ರನೆ! ಪ್ರಕೃತಿಪುರುಷರೆಂಬಿಬ್ಬರೂ ಶಾಶ್ವತರಾಗಿರುವರು. ಸಕಲ ಜಗತ್ತೂ ಪ್ರಕೃತಿಪುರುಷಮಯವೇ ಆಗಿದೆ. ಅವರು, ಭಂಗಾರ ಆಭರಣ ಹೇಗೋ ಹಾಗೆ ಯಾವಾಗಲೂ ಪರಸ್ಪರವಾಗಿ ವಿಯುಕ್ತರಾಗತಕ್ಕವರಲ್ಲ ॥ ೭ ॥ ಹೇಗಾದರೂ ಜ್ಞಾನಿಗಳು ಆ ಪ್ರಕೃತಿಪುರುಷಾತ್ಮಕನಾದ ನನ್ನನ್ನು ಪ್ರಕೃತಿಸ್ವಭಾವತೆಯನ್ನು ಪಡೆದವನನ್ನಾಗಿ ಹೇಳುವರು. ಆದುದರಿಂದ ಗುಣಸಮೇತನಾದ ನಾನು ಸ್ತ್ರೀರೂಪ-ಪುರುಷರೂಪಗಳೆಂಬ ಎರಡು

ऽಸ್ಮಿ ಗುಣವಾನಹಮ್ ॥ ೮ ॥ ಇಂದ್ರ ಉವಾಚ ॥ ಭಗವನ್ಸರ್ವದೇ-ವೇಶ ಕ್ಷೇತ್ರಜ್ಞ ವಿಷಯಾತಿಗ । ಅನಯಾ ಯುವತಿವ್ಯಕ್ತ್ಯಾ ಸಂಸ್ಥಿ-ತೋಽಸಿ ಕ್ವ ಮೇ ವದ ॥ ೯ ॥ ಶ್ರೀಭಗವಾನುವಾಚ ॥ ಸರ್ವದೇವಾ-ತ್ಮಿಕಾ ದೇವೀ ಯಾ ಶ್ರೀಃ ಕೋಲಾಪುರೇಶ್ವರೀ । ಸಾಕ್ಷಾತ್ಪರಬ್ರಹ್ಮ-ರೂಪಾಂ ವಿದ್ಧಿ ತಾಮೇವ ಮಾಂ ವೃಷನ್ ॥ ೧೦ ॥ ಇಂದ್ರ ಉವಾಚ ॥ ದೇವ ದೇವ ಮಹಾದೇವ್ಯಾಸ್ತ್ವದ್ರೂಪಿಣ್ಯಾಃ ಪ್ರಪೂಜನಮ್ । ವಿಧಿನಾ ಕೇನ ಕೃತ್ವಾತ್ರ ಶ್ರೇಯಃ ಪರಮವಾಪ್ನುಯುಃ ॥ ೧೧ ॥ ಶ್ರೀಭಗವಾನುವಾಚ ॥ ಇದಂ ಸಾರತರಂ ಜಿಷ್ಣೋ ಸಮಾಹಿತ-ಮನಾಃ ಶೃಣು । ವಕ್ಷ್ಯೇ ಹಿತಾಯ ಸರ್ವೇಷಾಂ ನರಾಣಾಂ ಚ ವಿಶೇಷತಃ ॥ ೧೨ ॥ ಅತ್ರಾऽವಿರ್ಭೂತಲಿಂಗಂ ತು ಸರ್ವತೇಜೋ-ಮಯಂ ಯತಃ । ಅತಸ್ತತ್ತದಭೀಷ್ಟಾನುರೂಪದೇವಾತ್ಮಕಂ ಸ್ಮೃತಮ್॥೧೩॥ ಪುನರಸ್ಮಿನ್ಮಹಾಲಿಂಗೇ ದಕ್ಷಿಣಂ ಪುರುಷಾತ್ಮಕಮ್ ।

---

ಪ್ರಕಾರವಾಗಿಯೂ ಇರುವೆನು ॥ ೮ ॥ ಇಂದ್ರನು ಹೇಳುವನು—ಶಬ್ದಸ್ಪರ್ಶಾದಿಗಳಿಗೆ ಸಿಕ್ಕದವನಾಗಿಯೂ, ಆತ್ಮನಾಗಿಯೂ, ಸಕಲದೇವತೆಗಳಿಗೊಡೆಯನಾಗಿಯೂ ಇರುವ ಎಲೈ ಭಗವಂತನೆ! ಈ ಸ್ತ್ರೀರೂಪವೆಂಬ ವಿಶೇಷದಿಂದ ಎಲ್ಲಿದ್ದಿಯೆಂಬುದನ್ನು ನನಗೆ ಹೇಳು ॥ ೯ ॥ ವಿಷ್ಣುವು ಹೇಳುವನು—ಎಲೈ ಇಂದ್ರನೆ! ಸರ್ವಾಮರಸ್ವರೂಪಿಣಿಯಾಗಿಯೂ, ಕೋಲಾಪುರಕ್ಕೊಡತಿಯಾಗಿಯೂ, ಯಾವ ದೇವಿಯಿರುವಳೋ ಸಾಕ್ಷಾತ್ ಪರಬ್ರಹ್ಮರೂಪೆಯಾದ ಆ ದೇವಿಯನ್ನೇ ಸ್ತ್ರೀರೂಪಿಯಾದ ನನ್ನನ್ನಾಗಿ ತಿಳಿ ॥ ೧೦ ॥ ಇಂದ್ರನು ಹೇಳುವನು—ಎಲೈ ದೇವನೆ! ಈ ಕೋಲಾಪುರಕ್ಷೇತ್ರದಲ್ಲಿ ನಿನ್ನ ರೂಪಳಾದ ಮಹಾದೇವಿಯ ಪೂಜೆಯನ್ನು ಯಾವ ವಿಧಿಯಿಂದ ಮಾಡಿ ಜನರು ಮುಖ್ಯವಾದ ಶ್ರೇಯಸ್ಸನ್ನು ಹೊಂದಿಯಾರು? ॥ ೧೧ ॥ ವಿಷ್ಣುವು ಹೇಳುವನು—ಎಲೈ ಇಂದ್ರನೆ! ಸರ್ವರಿಗೆ ಸಾಧಾರಣವಾಗಿಯೂ, ಮನುಷ್ಯರಿಗೆ ವಿಶೇಷವಾಗಿಯೂ, ಹಿತಕ್ಕೋಸ್ಕರ ಅತ್ಯಂತ ಸಾರವಾದ ಇದನ್ನು ಹೇಳುವೆನು, ಚೆನ್ನಾಗಿ ಮನಸ್ಸಿಟ್ಟು ಕೇಳು ॥ ೧೨ ॥ ಈ ಮಹಾಕ್ಷೇತ್ರದಲ್ಲಿ ಪ್ರಾದುರ್ಭವಿಸಿರುವ ಲಿಂಗವು ಸಕಲ ದೇವತಾತೇಜೋಮಯವಾದುದರಿಂದ ಇದು ಆಯಾಯ ಜನರಭೀಷ್ಟದೇವತೆಯ ಸ್ವರೂಪವಾಗುವುದೆಂದು ಹೇಳಲ್ಪಟ್ಟಿದೆ ॥ ೧೩ ॥ ಮತ್ತು ಈ ಮಹಾಲಿಂಗದಲ್ಲಿ ದಕ್ಷಿಣಭಾಗವು ಹರಿಹರಾದಿ ಪುರುಷರೂಪ

**ವಾಮಂ ಶಕ್ತ್ಯಾತ್ಮಕಂ ಮಧ್ಯಂ ಪುಂಪ್ರಕೃತ್ಯಾತ್ಮಿಕಾಽಂಬಿಕಾ ॥ ೧೪ ॥ ಯದ್ವಾಮಾಂಶಾಧಿಕ್ಯಮತ್ರ ಶಕ್ತೇಃ ಪ್ರಾಧಾನ್ಯಮೇವ ತತ್ । ಪುಂದೇವತಾರ್ಚನೇ ಗ್ರಾಹ್ಯೌ ದಂಪತೀ ಏವ ತಾವತಃ ॥ ೧೫ ॥ ನವಶಕ್ತ್ಯಾದಿಕಂ ಯತ್ತತ್ಸರ್ವಸಾಮಾನ್ಯಮುಚ್ಯತೇ । ಧ್ಯಾನಮಾತ್ರಂ ಪೃಥಗ್ಯದ್ವಾ ಸರ್ವಂ ತತ್ತದುದೀರಿತಮ್ ॥ ೧೬ ॥ ಕುತ್ರಚಿದ್ವಕ್ಷ್ಯ-ಮಾಣೇಽತ್ರ ಯುಕ್ತ್ಯಾ ಕುರ್ಯಾದ್ಯಥೋಚಿತಮ್ । ಧ್ಯಾನಾನಿ ಕಾನಿ-ಚಿದ್ವಕ್ಷ್ಯೇ ತದನ್ಯದ್ಗ್ರಾಹ್ಯಮನ್ಯತಃ ॥ ೧೭ ॥ ನಿತ್ಯೇ ಮೂಕಾಂಬಿಕೈ-ವಾತ್ರ ಪೂಜ್ಯಾ ಸ್ವೇಷ್ಟಾನ್ಯದೇವತಾಃ । ಕಾಮ್ಯೇ ನೈಮಿತ್ತಿಕೇವಾ-ಸ್ಯುರ್ನಿತ್ಯೇನ್ಯಾಶ್ಚೇದನರ್ಥದಾಃ ॥ ೧೮ ॥ ಪ್ರಾತರುತ್ಥಾಯ ಶಿರಸಿ ಸಂಸ್ಮರೇತ್ಪದ್ಮಮುಜ್ಜ್ವಲಮ್ । ಕರ್ಪೂರಾಭಂ ಸ್ಮರೇತ್ತತ್ರ ಶ್ರೀ-**

---

ವಾಗಿಯೂ, ವಾಮಭಾಗವು ಕಾಳೀ ಲಕ್ಷ್ಮೀ ಸರಸ್ವತ್ಯಾದಿ ಶಕ್ತಿರೂಪ ವಾಗಿಯೂ, ಮಧ್ಯಸ್ಥಿತಸ್ವರ್ಣರೇಖೆಯು ಶಿವಶಕ್ತ್ಯೈಕ್ಯರೂಪಿಣಿಯಾದ ಶ್ರೀ ಮಹಾಲಕ್ಷ್ಮಿಯ ಸ್ವರೂಪವಾಗಿಯೂ ಇರುತ್ತದೆ ॥ ೧೪ ॥ ಪುನಃ ಈ ಲಿಂಗ ದಲ್ಲಿ ವಾಮಭಾಗವು ಹೆಚ್ಚಾಗಿರುವುದರಿಂದ ಶಕ್ತಿಪ್ರಭಾವವೇ ಹೆಚ್ಚಾಗಿರು ವುದು. ಆದುದರಿಂದ ಪುರುಷದೇವತಾ ಪೂಜಾವಿಷಯದಲ್ಲಿ ಮಹೇಶಸಮೇತ ಶ್ರೀಮಹಾಲಕ್ಷ್ಮೀ, ಶಿವಸಮೇತ ಶ್ರೀಪಾರ್ವತೀ, ವಿಷ್ಣುಸಮೇತ ಶ್ರೀಲಕ್ಷ್ಮೀ ಇತ್ಯಾದಿ ದಂಪತಿಗಳೇ ಗ್ರಾಹ್ಯರಾಗುವರು ॥ ೧೫ ॥ ನವಶಕ್ತಿಮೂಲಮಂತ್ರಾ ವರಣಾಂಗಪೂಜಾಷೋಡಶೋಪಚಾರಗಳೆಲ್ಲವೂ ಸರ್ವದೇವರಿಗೂ ಸಾಮಾ ನ್ಯವಾಗಿಯೂ, ಧ್ಯಾನ ಮಾತ್ರ ಬೇರೆಯಾಗಿಯೂ ಹೇಳಲ್ಪಡುತ್ತದೆ. ಅಥವಾ ನವಶಕ್ತ್ಯಾದಿ ಸರ್ವವೂ ತತ್ತದ್ದೇವತೋಕ್ತವಾಗಿರುವುದೂ ಆಗಬಹುದು॥೧೬॥ ಮೇಲೆ ಹೇಳುವುದರಲ್ಲಿ ಕೆಲವು ಸ್ಥಾನದಲ್ಲಿ ಹೇಗೆ ವಿಭಕ್ತಿ ಮೊದಲಾದುದಕ್ಕೆ ಸಮಹೊಂದುವುದೋ ಹಾಗೆ ಯುಕ್ತಿಯಿಂದ ಸಮಮಾಡಿಕೊಳ್ಳತಕ್ಕದ್ದು ॥ ೧೭ ॥ ನಿತ್ಯದಲ್ಲಿಯೂ ಲಿಂಗದಲ್ಲಿ ಮಹಾಲಕ್ಷ್ಮೀ ಉದ್ದೇಶಿಸಿ ಪೂಜಿಸುವುದು ನೈಮಿತ್ತಿಕವಾದ ಶಿವರಾತ್ರೆ ಜನ್ಮಾಷ್ಟಮೀ ಮುಂತಾದ ಪೂಜೆಗಳನ್ನು ಆಯಾಯ ದೇವತೆಗಳನ್ನು ಉದ್ದೇಶಿಸಿ ಪೂಜಿಸಬೇಕು. ನಿತ್ಯದಲ್ಲಿ ಬೇರೆ ದೇವತಾ ಉದ್ದೇಶಿಸಿ ಪೂಜಿಸಿದರೆ ಅನರ್ಥವಾದೀತು ॥ ೧೮ ॥ ಪ್ರಾತಃಕಾಲ ದಲ್ಲೆದ್ದು ತನ್ನ ಶಿರಸ್ಸಿನಲ್ಲಿ ಬ್ರಹ್ಮರಂಧ್ರದಲ್ಲಿ ಪ್ರಜ್ವಲಿಪ ಸಹಸ್ರದಳಪದ್ಮ ವನ್ನು ಸ್ಮರಿಸತಕ್ಕದ್ದು. ಬಳಿಕಾ ಪದ್ಮದಲ್ಲಿ ಕರ್ಪೂರದಂತೆ ಶುಭ್ರನಾಗಿಯೂ,

**ಗುರುಂ ನಿಜರೂಪಿಣಮ್ ॥೧೯॥ ಸುಪ್ರಸನ್ನಂ ಲಸದ್ಭೂಷಾಭೂಷಿತಂ ಶಕ್ತಿಸಂಯುತಮ್ । ನಮಸ್ಕೃತ್ಯ ತತೋ ದೇವೀಂ ಕುಂಡಲೀಂ ಸಂಸ್ಮರೇದ್ಬುಧಃ ॥ ೨೦ ॥ ಪ್ರಕಾಶಮಾನಾಂ ಪ್ರಥಮೇ ಪ್ರಯಾಣೇ ಪ್ರತಿಪ್ರಯಾಣೇಽಪ್ಯಮೃತಾಯಮಾನಾಮ್ । ಅಂತಃಪದವ್ಯಾಮನು-ಸಂಚರಂತೀಮಾನಂದರೂಪಾಮಬಲಾಂ ಪ್ರಪದ್ಯೇ ॥ ೨೧ ॥ ಧ್ಯಾತ್ವೈ-ವಂ ತಚ್ಛಿಖಾಮಧ್ಯೇ ಸಚ್ಚಿದಾನಂದರೂಪಿಣೀಮ್ । ಮಾಂ ಧ್ಯಾಯೇ-ದಥ ಶೌಚಾದಿ ಕ್ರಿಯಾಃ ಸರ್ವಾಃ ಸಮಾಪಯೇತ್ ॥ ೨೨ ॥ ತತೋ ದೇವಾಲಯಂ ಗತ್ವಾ ಸಾಚಾರ್ಯೋ ಭಕ್ತಿಮಾನ್ಸ್ವಮಾನ್ । ಪ್ರಾರ್ಥನಾಪೂರ್ವಕಂ ದೇವ್ಯಾಃ ಪುರತಃ ಸ್ವಾಸನೇ ಸ್ಥಿತಃ ॥ ೨೩ ॥ ಸಂಕಲ್ಪ್ಯ ಭೂತಶುದ್ಧಿಂ ಚ ಮಾತೃಕಾನ್ಯಾಸಮೇವ ಚ । ಹೃಲ್ಲೇ-ಖಾಮಾತೃಕಾನ್ಯಾಸಂ ನಿತ್ಯಮೇವ ಸಮಾಚರೇತ್ ॥ ೨೪ ॥ ಮೂಲಾ-**

---

ತನ್ನ ಗುರುವಿಗೆ ಸಮಾನವಾದಾಕಾರವುಳ್ಳವನಾಗಿಯೂ ॥ ೧೯ ॥ ಅತಿಶಾಂತನಾಗಿಯೂ, ಪ್ರಜ್ವಲಿಸುವ ಭೂಷಣಗಳಿಂದಲಂಕೃತನಾಗಿಯೂ, ಪತ್ನೀಸಹಿತನಾಗಿಯೂ, ಇರುವ ಶ್ರೀಗುರುದೇವತೆಯನ್ನು ಸ್ಮರಿಸಿ ನಮಸ್ಕರಿಸತಕ್ಕದ್ದು. ಆ ಮೇಲೆ ಕುಂಡಲಿದೇವಿಯನ್ನು ಧ್ಯಾನಿಸತಕ್ಕದ್ದದೆಂತೆನೆ ॥ ೨೦ ॥ ಮೂಲಾಧಾರದಿಂದ ಬ್ರಹ್ಮರಂಧ್ರಕ್ಕೆ ಹೋಗೋಣವೆಂಬ ಪ್ರಥಮಪ್ರಯಾಣಕಾಲದಲ್ಲಿ ಚಿದ್ರೂಪತ್ವದಿಂದ ಪ್ರಕಾಶಿಸುವಳಾಗಿಯೂ, ಬ್ರಹ್ಮರಂಧ್ರದಿಂದ ಮೂಲಾಧಾರಕ್ಕೆ ಬರೋಣವೆಂಬ ಪ್ರತಿಪ್ರಯಾಣಕಾಲದಲ್ಲಿ ಆನಂದಾಮೃತ ಭರಿತಳಾಗಿಯೂ, ಸುಷುಮ್ನಾ ನಾಡಿಯೆಂಬ ಅಂತರ್ಮಾರ್ಗದಲ್ಲಿ ಗಮನಾಗಮನಗಳನ್ನು ಮಾಡುವವಳಾಗಿಯೂ, ಇರುವ ಆನಂದರೂಪಳಾದ ಪರಾಶಕ್ತಿಯನ್ನು ಶರಣುಹೊಂದುವೆನು ॥ ೨೧ ॥ ಎಲೈ ಇಂದ್ರನೆ! ಹೀಗೆ ಕುಂಡಲಿಯನ್ನು ಧ್ಯಾನಿಸಿ ಮೂಲಾಧಾರದಲ್ಲಿರುವ ಚಿದಗ್ನಿಯ ಶಿಖೆಯೆಂಬಾ ಕುಂಡಲಿನಿಯ ಮಧ್ಯದಲ್ಲಿ ಸಚ್ಚಿದಾನಂದರೂಪಳಾದ ಗುರುದೇವತೆಯೆಂಬ ನನ್ನನ್ನು ಧ್ಯಾನಿಸತಕ್ಕದ್ದು. ಬಳಿಕ ಶೌಚಾದಿ ನಿತ್ಯಕರ್ಮಗಳನ್ನೆಲ್ಲವನ್ನು ಮುಗಿಸತಕ್ಕದ್ದು ॥ ೨೨ ॥ ಆಮೇಲೆ ತನ್ನ ಪುರೋಹಿತನಿಂದ ಸಹಿತನಾಗಿ ಭಕ್ತಿಯಿಂದ ದೇವಾಲಯವನ್ನಯ್ದಿ ಪ್ರಾರ್ಥನಾಪೂರ್ವಕವಾಗಿ ದೇವಿಯ ಮುಂದೆ ಉತ್ತಮವಾದ ಆಸನದಲ್ಲಿ ಕುಳಿತು ॥ ೨೩ ॥ ಸಂಕಲ್ಪಿಸಿ ನಿತ್ಯವಾದ ಭೂತಶುದ್ಧಿ ಮಾತೃಕಾನ್ಯಾಸ ಹೃಲ್ಲೇಖಾ ಮಾತೃಕಾನ್ಯಾಸಗಳನ್ನು ಮಾಡತಕ್ಕದ್ದು ॥ ೨೪ ॥ ಬಳಿಕ ಮೂಲಾಧಾರದಲ್ಲಿ ಹಕಾರವನ್ನೂ, ಹೃದಯ

ಧಾರೇ ಹಕಾರಂ ಚ ಹೃದಯೇ ತು ರಕಾರಕಮ್ । ಭ್ರೂಮಧ್ಯೇ ತದ್ವದೀಕಾರಂ ಹ್ರೀಂಕಾರಂ ಮಸ್ತಕೇ ನ್ಯಸೇತ್ ॥ ೨೫ ॥ ಪ್ರಾಣಾ-ನಾಯಮ್ಯ ವಿಧಿವನ್ಮಂಡಲಾರ್ಚನಪೂರ್ವಕಮ್ । ಕಲಶಂ ಶಂಖ-ಮಾತ್ಮಾನಂ ಚಾಭ್ಯರ್ಚ್ಯ ಸ್ವಾತ್ಮಭಾವತಃ ॥ ೨೬ ॥ ಸ್ವಾಗಮೋಕ್ತ-ವಿಧಾನೇನ ಕೃತ್ವಾ ಪೀಠಾರ್ಚನಂ ಪುನಃ । ನವಶಕ್ತೀರ್ಯಜೇದೇ-ತಾಶ್ಚಿನ್ಮಯೀಶ್ಚ ಸನಾತನೀಃ ॥ ೨೭ ॥ ಇಚ್ಛಾ ಕ್ರಿಯಾ ತಥಾ ಜ್ಞಾನಂ ಪ್ರೀತಿಸ್ತುಷ್ಟಿರ್ಜಯಾ ಪುನಃ । ಅನಂತಾ ಚೋನ್ಮನೀ ಚೈವ ಚಿತ್ರ-ಭೇತಿ ನವಕ್ರಮಾತ್ ॥ ೨೮ ॥ ವಕ್ಷ್ಯಮಾಣಪ್ರಕಾರೇಣ ಧ್ಯಾತ್ವಾ ದೇವೀಂ ಪರೇಶ್ವರೀಮ್। ಆವಾಹಯೇತ್ಪೀಠಮಧ್ಯೇ ಕರ್ಣಿಕಾಯಾಂ ಸುನಿಶ್ಚಲಾಮ್ ॥ ೨೯ ॥ ಅತ್ರ ತ್ವಾವಾಹನಂ ಯಸ್ಮಾದ್ವಿಧಿಮಾತ್ರಂ ಪ್ರಚೋದಿತಮ್ । ಸದಾ ಸನ್ನಿಹಿತತ್ವಾದ್ಧಿ ನಾರ್ಥತಃ ಕಥಿತಂ ಮಯಾ ॥ ೩೦ ॥ ಮೂಲವಿದ್ಯಾಮಿಮಾಂ ಮುಖ್ಯಾಂ ವಕ್ಷ್ಯೇ ಶ್ರೀ-ಷೋಡಶಾಕ್ಷರೀಮ್ । ಸರ್ವಜ್ಞತ್ವಪ್ರದಾಂ ಕ್ಷಿಪ್ರಂ ದೇವ್ಯನುಗ್ರಹ-

---

ದಲ್ಲಿ ರಕಾರವನ್ನೂ, ಭ್ರೂಮಧ್ಯದಲ್ಲಿ ಈಕಾರವನ್ನೂ, ಶಿರಸ್ಸಿನಲ್ಲಿ ಹ್ರೀಂಕಾರವನ್ನೂ, ನ್ಯಾಸಮಾಡತಕ್ಕದ್ದು ॥ ೨೫ ॥ ಹಾಗೆ ವಿಧಿವತ್ತಾಗಿ ಪ್ರಾಣಾಯಾಮವನ್ನು ಗೆಯ್ದು ತನ್ನ ರೂಪವೆಂಬ ಭಾವನೆಯಿಂದ ಮಂಡಲಾರ್ಚನಪೂರ್ವಕವಾಗಿ ಕಲಶವನ್ನೂ, ಶಂಖವನ್ನೂ, ಆತ್ಮನನ್ನೂ ಪೂಜಿಸಿ ॥ ೨೬ ॥ ಶ್ರೇಷ್ಠವಾದ ಆಗಮದಲ್ಲಿ ಹೇಳಲ್ಪಟ್ಟ ವಿಧಾನದಿಂದ ಪೀಠಪೂಜೆಯನ್ನು ಮಾಡಿ ಪುನಃ ಚಿದ್ರೂಪಿಣಿಯರಾಗಿಯೂ, ಸರ್ವದಾ ಏಕಪ್ರಕಾರದಿಂದಿರುವವರಾಗಿಯೂ, ಇರುವ ಈ ನವಶಕ್ತಿಗಳನ್ನು ಪೂಜಿಸತಕ್ಕದ್ದು ॥ ೨೭ ॥ 'ಇಚ್ಛಾಯೈ ನಮಃ, ಕ್ರಿಯಾಯೈ, ಜ್ಞಾನಾಯ, ಪ್ರೀತ್ಯೈ, ತುಷ್ಟ್ಯೈ, ಜಯಾಯೈ, ಅನಂತಾಯೈ, ಉನ್ಮನ್ಯೈ, ಚಿತ್ರಭಾಯೈ ನಮಃ ॥ ಹೀಗೆ ಒಂಭತ್ತು ದೇವಿಯರನ್ನು ಕ್ರಮದಂತೆ ಪೂಜಿಸತಕ್ಕದ್ದು ॥ ೨೮ ॥ ಬಳಿಕ ಮೇಲೆ ಹೇಳುವ ಪ್ರಕಾರದಿಂದ ಪರದೇವತೆಯನ್ನು ಸ್ಥಿರವಾಗಿ ಧ್ಯಾನಿಸಿ ಜ್ಯೋತಿರ್ಲಿಂಗಮಧ್ಯದಲ್ಲಿ ಕರ್ಣಿಕೆಯಲ್ಲಿ ಆವಾಹಿಸತಕ್ಕದ್ದು ॥ ೨೯ ॥ ಇಲ್ಲಿ ಸರ್ವದಾ ಸಾನ್ನಿಧ್ಯವು ಏಕಪ್ರಕಾರವಿರುವುದರಿಂದ ಆವಾಹನಕ್ರಮ ಮಾತ್ರ ತೋರಿಸಲ್ಪಟ್ಟದ್ದಲ್ಲದೆ ಪರಮಾರ್ಥವಾಗಿ ನನ್ನಿಂದ ಹೇಳಲ್ಪಡಲಿಲ್ಲ ॥ ೩೦ ॥ ಇಲ್ಲಿ ಮುಖ್ಯವಾದ ಕುಮಾರಿಕಾಷೋಡಶಾಕ್ಷರಿಯೆಂಬೀ ಮೂಲಮಂತ್ರ

**ಕಾರಣಮ್ ॥ ೩೧ ॥ ಈಶ್ವರಸ್ತು ಋಷಿಃ ಪ್ರೋಕ್ತೋ ಗಾಯತ್ರೀ ಛಂದ ಈರಿತಮ್ । ಸಚ್ಚಿದಾನಂದರೂಪಾ ಹಿ ದೇವತಾ ಶ್ರೀಕುಮಾರಿಕಾ ॥ ೩೨ ॥ ಏಕಷಣ್ಣವಭಿರ್ಬೀಜಂ ಶಕ್ತಿಃ ಕೀಲಕಮಕ್ಷರೈಃ । ನ್ಯಾಸಾಃ ಷಟ್ಕ್ರಮಾದೇಕತ್ರಿತ್ರಿಷಟ್ತ್ರಿಸಮುಗ್ರಕೈಃ ॥ ೩೩ ॥ ವ್ಯಾಹೃತ್ಯಾ ದಿಗ್ಬಂಧನಂ ಚ ಕೃತ್ವಾಽಥ ಧ್ಯಾನಮುತ್ತಮಮ್ । ಕಾರ್ಯಂ ಮಂತ್ರಜಪೋಽಪ್ಯತ್ರ ತತಸ್ತೌ ದ್ವಾವಿಹ ಶೃಣು ॥ ೩೪ ॥ ಭಾಸ್ವದ್ರತ್ನಾಭರಣವಸನಾಲಂಕೃತೇ ಚಾರುಹಸ್ತೈಃ ಶಂಖಂ ಚಕ್ರಂ ವರದಮಭಯಂ ಸಂವಹಂತೀ ತ್ರಿನೇತ್ರೀ । ಹೇಮಪ್ರಖ್ಯೇ ಪ್ರಣತವರಸಂಧಾತ್ರಿ ಪದ್ಮಾಸನಸ್ಥೇ ಕಾರುಣ್ಯಾಬ್ಧೇ ಭಗವತಿ ಮಹಾಲಕ್ಷ್ಮಿ ಮಾಂ ರಕ್ಷ ನಿತ್ಯಮ್ ॥ ೩೫ ॥ ಪ್ರಣವಃ ಪ್ರಥಮೋಽಸ್ಯ ಮನೋರಥವಾಗ್ಭವ ಗೌರಿಪದಂ ಯುಗಲಮ್ । ಅಥ ವಾಕ್ಪರಮೇಶ್ವರಿ**

---

ವನ್ನು ಹೇಳುವೆನು. ಇದು ಸಾಧಕರಿಗೆ ಶೀಘ್ರದಿಂದ ಸರ್ವಜ್ಞತ್ವವನ್ನು ಕೊಡುವುದಾಗಿಯೂ, ದೇವಿಯನುಗ್ರಹಲಾಭಕ್ಕೆ ಕಾರಣವೂ ಆಗಿದೆ ॥ ೩೧ ॥ 'ಈಶ್ವರ ಋಷಿಃ ಗಾಯತ್ರೀ ಛಂದಃ ಸಚ್ಚಿದಾನಂದರೂಪಿಣೀ ಶ್ರೀಕುಮಾರಿಕಾ ಪರಮೇಶ್ವರೀ ದೇವತಾ ॥' ಎಂದು ಋಷಿಚ್ಛಂದೋ ದೇವತೆಗಳು ಹೇಳಲ್ಪಟ್ಟಿವೆ ॥ ೩೨ ॥ ಮೂಲಮಂತ್ರದಲ್ಲಿ ಕ್ರಮದಿಂದ, ಒಂದು, ಆರು, ಒಂಭತ್ತು ಅಕ್ಷರಗಳಿಂದ ಬೀಜಶಕ್ತಿಕೀಲಕಗಳೂ, ಒಂದು, ಮೂರು, ಮೂರು, ಆರು, ಮೂರು, ಒಟ್ಟಾಗಿ ಹದಿನಾರು, ಇಷ್ಟಕ್ಷರಗಳಿಂದ ಕರನ್ಯಾಸವನ್ನೂ ಅಂಗನ್ಯಾಸವನ್ನೂ ಮಾಡತಕ್ಕದ್ದು ॥ ೩೩ ॥ ಆ ಮೇಲೆ, ವ್ಯಾಹೃತಿಯಿಂದ ದಿಗ್ಬಂಧನವನ್ನು ಗೆಯ್ದು ಶ್ರೇಷ್ಠವಾದ ಧ್ಯಾನವೂ, ಮಂತ್ರ ಜಪವೂ ಮಾಡತಕ್ಕದ್ದಾದ್ದರಿಂದ ಎರಡನ್ನೀಗ ಕೇಳು ॥ ೩೪ ॥ ಪ್ರಜ್ವಲಿಸುವ ರತ್ನಖಚಿತ ಕಿರೀಟತಾಟಂಕಾದಿ ಭೂಷಣ ಪೀತಾಂಬರಗಳಿಂದಲಂಕೃತಳಾಗಿಯೂ, ಮನೋಹರಗಳಾದ ನಾಲ್ಕು ಕೈಗಳಿಂದ ಶಂಖ, ಚಕ್ರ, ವರದ, ಅಭಯುಗಳನ್ನು ಧರಿಸಿದವಳಾಗಿಯೂ, ಮೂರು ಕಣ್ಣುಗಳುಳ್ಳವಳಾಗಿಯೂ, ಭಂಗಾರದಂತೆ ದೇಹವರ್ಣವುಳ್ಳವಳಾಗಿಯೂ, ಭಕ್ತರಿಗೆ ವರಗಳನ್ನು ಕೊಡುವವಳಾಗಿಯೂ, ಪದ್ಮಾಸನದಲ್ಲಿ ಕುಳಿತಿರುವವಳಾಗಿಯೂ, ಕರುಣಾಸಮುದ್ರಳಾಗಿಯೂ ಇರುವ, ಎಲೈ ಷಡ್ಗುಣೈಶ್ವರ್ಯಸಂಪನ್ನಳಾದ ಮಹಾಲಕ್ಷ್ಮಿಯೆ! ನೀನು ಯಾವಾಗಲೂ ನನ್ನನ್ನು ರಕ್ಷಿಸು (ಇದು ಧ್ಯಾನಶ್ಲೋಕವು) ॥ ೩೫ ॥ ಈ ಷೋಡಶಾಕ್ಷರಿಗೆ

**ವಾಗ್ಭವನ್ಯೈಶ್ವನರಪ್ರಿಯಯಾ ಕ್ರಮಶಃ ॥ ೩೬ ॥ ಅಯಂ ಕಲ್ಪ-ದ್ರುಮಃ ಸಾಕ್ಷಾನ್ಮಂತ್ರರಾಜೋ ಭವೇತ್ಪುನಃ । ಲಕ್ಷ್ಮೀಮಾಯಾ-ಕಾಮರಾಜಯುಕ್ತಶ್ಚೇನ್ನಿಖಿಲಾತ್ಮಕಃ ॥ ೩೭ ॥ ಇಮಂ ಜಪ್ತ್ವಾಽಷ್ಟ-ವಾರಂ ತಲ್ಲಿಂಗೇ ಪಂಚೋಪಚಾರಕೈಃ । ಸಂಪೂಜ್ಯಾಥೋ ಷೋಡ-ಶೋಪಚಾರಾದ್ಯೈಸ್ತು ಪ್ರಪೂಜಯೇತ್ ॥ ೩೮ ॥ ಮಾರ್ಕಂಡೇ-ಯೋಕ್ತಮೂಕಾಂಬಾನಾಮಸಾಹಸ್ರಕೇಣ ಚ । ಪೂಜಯೇದಥ ವಾ ತತ್ತದ್ದೇವತೋದಿತನಾಮಭಿಃ ॥ ೩೯ ॥ ಓಂಕಾರಮಂದಿರೈಂಕಾರ-ವೇದ್ಯಾ ಗೌರವದಾಯಿನೀ । ರಿರಂಸ್ಯೈಂಕಾರಿಣೀ ಗೌರೀ ರಿಕ್ತಾರೂಪೈಂ-**

---

ಒಂದನೆಯಕ್ಷರವು ಪ್ರಣವವು, ಆಮೇಲೆ ಕ್ರಮದಿಂದ ವಾಗ್ಬೀಜಸಹಿತಳಾದ ಗೌರಿ ಎಂಬ ಪದಗಳೆರಡೂ, ವಾಗ್ಬೀಜವೂ, ಪರಮೇಶ್ವರಿ ಎಂಬ ಪದವೂ, ಮತ್ತು ವಾಗ್ಬೀಜವೂ, ಸ್ವಾಹಾಕಾರವೂ ಇರುವುವು (ಇದು ಮಂತ್ರೋದ್ಧಾರವು) ॥ ೩೬ ॥ ಈ ಅತಿಶ್ರೇಷ್ಠವಾದ ಮಂತ್ರವು ಸಾಧಕರಿಗೆ ಸಾಕ್ಷಾತ್ ಕಲ್ಪವೃಕ್ಷದಂತೆ ಇಷ್ಟಾರ್ಥಗಳನ್ನು ಕೊಡತಕ್ಕದ್ದಾಗಿದೆ. ಮತ್ತೆ ಇದು ಆದಿಯಲ್ಲಿ ಲಕ್ಷ್ಮೀಬೀಜ ಮಾಯಾಬೀಜ ಕಾಮರಾಜಬೀಜಗಳಿಂದ ಯುಕ್ತವಾದರೆ ಸಕಲಮಂತ್ರಸ್ವರೂಪವಾದೀತು ॥ ೩೭ ॥ ಈ ಮಂತ್ರವನ್ನು ಎಂಟಾವರ್ತಿ ಆ ಲಿಂಗದಲ್ಲಿ ಜಪಿಸಿ ಪಂಚೋಪಚಾರಗಳಿಂದ ಪೂಜಿಸಿ ಬಳಿಕ ಷೋಡಶೋಪಚಾರಾದಿಗಳಿಂದ ಪೂಜಿಸತಕ್ಕದ್ದು ॥ ೩೮ ॥ ಮತ್ತು ಮಾರ್ಕಂಡೇಯೋಕ್ತ ಮೂಕಾಂಬಿಕಾಸಹಸ್ರನಾಮಗಳಿಂದ ಅಥವಾ ಆಯಾವ ದೇವತೆಗಳಿಗೆ ಹೇಳಲ್ಪಟ್ಟ ಲಲಿತಾದಿಶಕ್ತಿಸಹಸ್ರನಾಮಾದಿಗಳಿಂದಲಾಗಲೀ ವಿಷ್ಣುಶಿವಾದಿಪುರುಷ ಸಹಸ್ರನಾಮಾದಿಗಳಿಂದಾಗಲೀ ಪೂಜಿಸತಕ್ಕದ್ದು ॥ ೩೯ ॥ 'ಓಂಕಾರಮಂದಿರಾಯೈ ನಮಃ ಪಾದೌ ಪೂಜಯಾಮಿ, ಐಂಕಾರವೇದ್ಯಾಯೈ ಜಂಘೇ, ಗೌರವದಾಯಿನ್ಯೈ ಜಾನುನೀ, ರಿರಂಸಾಯೈ ಊರೂ, ಐಂಕಾರಿಣ್ಯೈ ಗುಹ್ಯಂ, ಗೌರ್ಯೈ ಕಟಿಂ, ರಿಕ್ತರೂಪಾಯೈ ಉದರಂ, ಐಂಪದಪ್ರಿಯಾಯೈ ವಕ್ಷಸ್ಥಲಂ, ಪದ್ಮಾಸನಾಯೈ ಸ್ತನೌ, ರಮಾಯೈ ಸ್ಕಂಧೌ, ಮೇರು-ಸಂಸ್ಥಾಯೈ ಕಂಠಂ, ಶ್ವಸನರೂಪಿಣ್ಯೈ ಮುಖಂ, ರಿಪುಹಂತ್ರ್ಯೈ ನಾಸಿಕಾಂ, ಐಂಕಾರಮೂರ್ತಯೇ ನೇತ್ರಾಣಿ, ಸ್ವಾಮಿನ್ಯೈ ಲಲಾಟಂ, ಹಾಯನಾತ್ಮಿ-ಕಾಯೈ ಶಿರಃ ಪೂಜಯಾಮಿ ॥' ಈ ಕುಮಾರಿಕಾ ವಿದ್ಯಾಮಂತ್ರಗರ್ಭಿತಗಳಾದ ಶ್ರೀಮಹಾಲಕ್ಷ್ಮಿಯ ಷೋಡಶನಾಮಗಳಿಂದ ಕ್ರಮವಾಗಿ ದೇವಿಯ

**ಪದಪ್ರಿಯಾ ॥ ೪೦ ॥ ಪದ್ಮಾಸನಾ ರಮಾ ಮೇರುಸಂಸ್ಥಾ ಶ್ವಸನ-ರೂಪಿಣೀ । ರಿಪುಹಂತ್ರ್ಯೈಂಕಾರಮೂರ್ತಿಃ ಸ್ವಾಮಿನೀ ಹಾಯು-ನಾತ್ಮಿಕಾ ॥ ೪೧ ॥ ಏತೈಃ ಕುಮಾರಿಕಾ ವಿದ್ಯಾ ಮಂತ್ರಗರ್ಭಿತ-ನಾಮಭಿಃ । ಇಮಾನಿ ಷೋಡಶಾಂಗಾನಿ ಶ್ರೀದೇವ್ಯಾಃ ಕ್ರಮಶೋ-ಽರ್ಚಯೇತ್॥೪೨॥ಪಜ್ಜಂಘೌಜಾನೂರುಗುಹ್ಯಕಟೀರುದರವಕ್ಷಸೀ। ಸ್ತನೌ ಸ್ಕಂಧೌ ಕಂಠಮುಖನಾಸಾನೇತ್ರಲಲಾಟಕಮ್ ॥ ೪೩ ॥ ಅಥ ಮೂಲಾಂಗಮಂತ್ರೈಸ್ತು ಪ್ರಥಮಾವರಣಂ ಯಜೇತ್ ।**

---

ಹದಿನಾರಂಗಗಳನ್ನು ಈ ಪ್ರಕಾರದಿಂದ ಪೂಜಿಸತಕ್ಕದ್ದು. ಈ ನಾಮಗಳರ್ಥವು, ಓಂಕಾರಮಂದಿರಾ— ಓಂಕಾರವೇ ಮನೆಯಾಗಿವುಳ್ಳವಳು, ಐಂಕಾರವೇದ್ಯಾ— ಐಂಕಾರದಿಂದ ತಿಳಿಯಲು ಯೋಗ್ಯಳಾಗಿರುವವಳು, ಗೌರವದಾಯಿನೀ— ರುದ್ರ-ವಿಷ್ಣು- ಬ್ರಹ್ಮೇಂದ್ರಾದಿ ಸ್ಥಾನಗಳನ್ನು ಕೊಡುವವಳು, ರಿರಂಸಾ—ಪರಮಾತ್ಮನಿಗೆ ಕ್ರೀಡಿಸಲುಳ್ಳ ಇಚ್ಛೆಯಾಗಿರುವವಳು, ಐಂಕಾರಿಣೀ—ಐಂ ಎಂಬ ಸ್ವರವುಳ್ಳವಳು, ಗೌರೀ— ಜಗತ್ತಿನ ಸೃಷ್ಟಿ-ಸ್ಥಿತಿಲಯಗಳ ಉದ್ಯಮವುಳ್ಳವಳು, ರಿಕ್ತರೂಪಾ— ರೂಪನಾಮಾದಿಶೂನ್ಯಳಾಗಿರುವವಳು, ಐಂಪದಪ್ರಿಯಾ— ಐಂ ಎಂಬ ಪದವೆ ಇಷ್ಟವಾಗಿವುಳ್ಳವಳು, ಪದ್ಮಾಸನಾ— ಮೂಲಾಧಾರ ಪದ್ಮಾದಿಗಳೆ ಶಾಕಿನ್ಯಾದಿ ರೂಪದಿಂದ ವಾಸ ಮಾಡತಕ್ಕ ಪೀಠಗಳಾಗಿರುವವಳು, ರಮಾ— ಯೋಗಿಗಳ ಹೃದಯದಲ್ಲಿ ಕ್ರೀಡಿಸುವವಳು, ಮೇರುಸಂಸ್ಥಾ— ಮೇರುರೂಪವಾದ ಶ್ರೀಚಕ್ರವೆಂಬ ಜ್ಯೋತಿರ್ಲಿಂಗದಲ್ಲಿ ವಾಸಮಾಡಿರುವವಳು, ಅಥವಾ ಸುಮೇರು ಶೃಂಗಮಧ್ಯದಲ್ಲಿರುವವಳು, ಶ್ವಸನರೂಪಿಣೀ—ಪ್ರಾಣರೂಪಳಾಗಿರುವವಳು, ರಿಪುಹಂತ್ರೀ-ಕಾಮಕ್ರೋಧಾದಿಗಳೆಂಬ ಶತ್ರುಗಳನ್ನು ಸಂಹರಿಸತಕ್ಕ ಬ್ರಹ್ಮವಿದ್ಯೆಯಾಗಿರುವವಳು, ಐಂಕಾರಮೂರ್ತೀ— ಐಂಕಾರವೇ ದೇಹವಾಗಿರುವವಳು, ಸ್ವಾಮಿನೀ— ರುದ್ರಾದಿ ಸಮಸ್ತರಿಗೂ ಒಡತಿಯಾಗಿರುವವಳು, ಹಾಯುನಾತ್ಮಿಕಾ— ಸಂವತ್ಸರಾಯನರ್ತುಮಾಸಾದಿ ಕಾಲರೂಪಳಾಗಿರುವವಳು ॥ ೪೦ ॥ ೪೧ ॥ ಬಳಿಕ ಮೂಲಮಂತ್ರದ ಹೃದಯಾದಿ ಷಡಂಗಮಂತ್ರಗಳಿಂದ ಪ್ರಥಮಾವರಣಪೂಜೆಯನ್ನು ಮಾಡತಕ್ಕದ್ದು. ಆದರೆ ಸ್ವಾಹಾ, ವಷಟ್, ಹುಂ, ವೌಷಟ್, ಫಟ್, ಎಂಬೀ ಐದು ಪಲ್ಲವಸ್ಥಾನಗಳಲ್ಲಿಯೂ, ನಮಃ ಎಂಬುದನ್ನೇ ಯೋಜಿಸತಕ್ಕದ್ದು ॥ ೪೨ ॥ ೪೩ ॥ ಅಣಿಮಾಯ್ಯೈ, ಮಹಿ

ದ್ವಿತೀಯಾವರಣೇ ಪೂಜ್ಯಾ ಅಣಿಮಾದ್ಯಷ್ಟಸಿದ್ಧಯಃ ॥ ೪೪ ॥ ಇಚ್ಛಾಕ್ರಿಯಾ ಚ ಜ್ಞಾನಂ ಚಿತ್ಸಂವಿನ್ಮಾಯಯಾ ವಿಲಾಸಿನೀ। ಸೂಕ್ಷ್ಮಾ ಮಹಾ ವ್ಯಾಪಿನೀತಿ ಶಕ್ತ್ಯಂತಾಸ್ತಾ ದಶೋತ್ತರೇ ॥ ೪೫ ॥ ಚತುರ್ಥಾವರಣೇ ಶಂಖಚಕ್ರಾಭಯವರಾನ್ಯಜೇತ್। ಪಂಚಮಾವರಣೇ ವಾಮಾ ಜ್ಯೇಷ್ಠಾದ್ಯಾ ನವ ಚಾರ್ಚಯೇತ್ ॥ ೪೬ ॥ ಜಾಗ್ರತಾ ತಾಪಿನೀ ವೇದಗರ್ಭಾ ದಹನರೂಪಿಣೀ । ಸೇಂದುಖಂಡಾ ಶುಂಭಹಂತ್ರೀ ವಾಗೀಶ್ವರೀ ಮದಾವಹಾ ॥ ೪೭ ॥ ಮನೋಜವಾ ಸೋಮರೂಪಾ ಮರುದ್ವೇಗಾ ನಿಶಾಹ್ವಯಾ । ಯಶೋವತೀ ತೀವ್ರಕೋಪಾ ತೋಯರೂಪಾ ದಯಾವತೀ ॥ ೪೮ ॥ ತಿರಸ್ಕ್ರಿಯಾ ತಾಪಹಾರೀ ಪ್ರಾಜ್ಞಾರಾಧ್ಯಾಽಮರಪ್ರಿಯಾ । ನಂದಿನೀ ರಿಪುಮರ್ದಿನ್ಯೌ ತಿಗ್ಮಾ ದುರ್ಗಾ ಚ ದಂಡಿನೀ ॥ ೪೯ ॥ ಗಾಯತ್ರೀ ನಿರಪತ್ಯಾ ಚ ವಿಶಾಲಾಕ್ಷೀ ಚ ನಾದಿನೀ । ವೇದನಾ ವಹ್ನಿಗರ್ಭಾ ಚ ಸೂರ್ಯಾಖ್ಯಾ ಸಿಂಹ-

---

ಮಾಯೈ, ಗರಿಮಾಯೈ, ಲಘಿಮಾಯೈ, ಪ್ರಾಪ್ತ್ಯೈ, ಪ್ರಾಕಾಮ್ಯಾಯ, ಈಶಿತ್ವಾಯ, ವಶಿತ್ವಾಯ ॥ ಇತಿ ದ್ವಿತೀಯಾವರಣಮ್ ॥ ೪೪ ॥ ಇಚ್ಛಾಶಕ್ತ್ಯೈ, ಕ್ರಿಯಾಶಕ್ತ್ಯೈ, ಜ್ಞಾನಶಕ್ತ್ಯೈ, ಚಿಚ್ಛಕ್ತ್ಯೈ, ಸಂವಿಚ್ಛಕ್ತ್ಯೈ, ಮಾಯಾಶಕ್ತ್ಯೈ, ವಿಲಾಸಿನೀಶಕ್ತ್ಯೈ, ಸೂಕ್ಷ್ಮಶಕ್ತ್ಯೈ, ಮಹಾಶಕ್ತ್ಯೈ, ವ್ಯಾಪಿನೀಶಕ್ತ್ಯೈ ॥ ಇತಿ ತೃತೀಯಾವರಣಮ್ ॥ ೪೫ ॥ ಶಂಖಾಯ, ಚಕ್ರಾಯ, ಅಭಯಾಯ, ವರದಾಯ ॥ ಇತಿ ಚತುರ್ಥಾವರಣಮ್ ॥ ವಾಮಾಯೈ, ಜ್ಯೇಷ್ಠಾಯೈ, ರೌದ್ರ್ಯೈ, ಕಾಲ್ಯೈ, ಕಲವಿಕಲಿನ್ಯೈ, ಬಲವಿಕಲಿನ್ಯೈ, ಬಲಪ್ರಮಥಿನ್ಯೈ, ಸರ್ವಭೂತದಮನ್ಯೈ, ಮನೋನ್ಮನ್ಯೈ ॥ ಇತಿ ಪಂಚಮಾವರಣಮ್ ॥ ೪೬ ॥ ಜಾಗ್ರತಾಯೈ, ತಾಪಿನ್ಯೈ, ವೇದಗರ್ಭಾಯೈ, ದಹನರೂಪಿಣ್ಯೈ, ಸೇಂದುಖಂಡಾಯೈ, ಶುಭಹಂತ್ರ್ಯೈ, ವಾಗೀಶ್ವರ್ಯೈ, ಮದಾವಹಾಯೈ ॥ ೪೭ ॥ ಮನೋಜವಾಯೈ, ಸೋಮರೂಪಾಯೈ, ಮರುದ್ವೇಗಾಯೈ, ನಿಶಾಹ್ವಯಾಯೈ, ಯಶೋವತ್ಯೈ, ತೀವ್ರಕೋಪಾಯೈ, ತೋಯರೂಪಾಯೈ, ದಯಾವತ್ಯೈ ॥ ೪೮ ॥ ತಿರಸ್ಕ್ರಿಯಾಯೈ, ತಾಪಹಾರ್ಯೈ, ಜ್ಞಾರಾಧ್ಯಾಯೈ, ಅಮರಪ್ರಿಯಾಯೈ, ನಂದಿನ್ಯೈ, ರಿಪುಮರ್ದಿನ್ಯೈ, ತಿಗ್ಮಾಯೈ, ದುರ್ಗಾಯೈ, ದಂಡಿನ್ಯೈ ॥ ೪೯ ॥ ಗಾಯತ್ರ್ಯೈ, ನಿರಪತ್ಯಾಯೈ, ವಿಶಾಲಾಕ್ಷ್ಯೈ, ನಾದಿನ್ಯೈ, ವೇದನಾಯೈ, ವಹ್ನಿಗರ್ಭಾಯೈ, ಸೂರ್ಯಾ-

ವಾಹಿನೀ ॥೫೦॥ ದುಃಸಹಾ ಚ ರಿರಂಸಾ ಚ ತಾಪಹಾರಿಣ್ಯನಾತುರಾ । ತ್ಯಕ್ತದೋಷಾ ನಿಃಸಪತ್ನಾ ಚೈತಾಃ ಷಷ್ಠ್ಯಾವೃತೌ ಯಜೇತ್ ॥೫೧॥ ಸಪ್ತಮಾವರಣೇ ಪೂಜ್ಯಾಃ ಸಿಂಹೋ ಭದ್ರೋ ಹಿಮಾಚಲಃ । ಮೇರುಸ್ತ್ರಿಕೂಟಃ ಪಾರ್ಯಾತ್ರೋ ಗಂಧಮಾದನ ಏವ ಚ ॥೫೨॥ ಮಲಯೋ ದುರ್ಧರಶ್ಚಾಪಿ ಸಂಜೀವಕ ಇಮೇ ಪುನಃ । ಗಿರ್ಯಂತರಾಲೇ ಬ್ರಾಹ್ಮ್ಯಾದಿಮಾತರೋಽಷ್ಟೌ ಪ್ರಪೂಜಯೇತ್ ॥ ೫೩ ॥ ಗಿರಿಪರ್ವಸು ಚಾಪ್ಯತ್ರ ಯಜೇದಷ್ಟೌ ಚ ಭೈರವಾನ್ । ಅಷ್ಟಮಾವರಣೇ ಪೂಜ್ಯಾ ಇಂದ್ರಾದ್ಯಾ ಲೋಕಪಾಲಕಾಃ ॥ ೫೪ ॥ ನವಮಾವರಣೇ ಚೈವ ವಜ್ರಾದೀನಿ ಪ್ರಪೂಜಯೇತ್ । ಏವಮಾವರಣಾನ್ಯತ್ರ ಪ್ರೋಕ್ತಾನಿ ನವ ವಾಸವ ॥ ೫೫ ॥ ಅಥ ತತ್ತದ್ದೇವತಾನಾಂ ಧ್ಯಾನಾನ್ಯಪಿ ಚ ಕಾನಿಚಿತ್ । ಉಕ್ತ್ವಾ ತು ಶ್ರೀಮಹಾಲಕ್ಷ್ಮ್ಯಾಃ ಧ್ಯಾನಾದ್ಯಂ

---

ಖ್ಯಾಯೈ, ಸಿಂಹವಾಹಿನ್ಯೈ ॥ ೫೦ ॥ ದುಃಸಹಾಯೈ, ರಿರಂಸಾಯೈ, ತಾಪಹಾರಿಣ್ಯೈ, ಅನಾತುರಾಯೈ, ತ್ಯಕ್ತದೋಷಾಯೈ, ನಿಃಸಪತ್ನಾಯೈ ॥ ಇತಿ ಷಷ್ಠ್ಯಾವರಣಮ್ ॥ ೫೧ ॥ ಸಿಂಹಾಯ, ಭದ್ರಾಯ, ಹಿಮಾಚಲಾಯ, ಮೇರವೇ, ತ್ರಿಕೂಟಾಯ, ಪಾರ್ಯಾತ್ರಾಯ, ಗಂಧಮಾದನಾಯ ॥ ೫೨ ॥ ಮಲಯಾಯ, ದುರ್ಧರಾಯ, ಸಂಜೀವಕಾಯ, (ಪರ್ವತಗಳ ಒಳಗಡೆಯಲ್ಲಿ) ಬ್ರಾಹ್ಮ್ಯೈ, ಮಾಹೇಶ್ವರ್ಯೈ, ಕೌಮಾರ್ಯೈ, ವಾರಾಹ್ಯೈ, ಇಂದ್ರಾಣ್ಯೈ ಚಾಮುಂಡಾಯೈ, ಮಹಾಲಕ್ಷ್ಮ್ಯೈ ॥ ೫೩ ॥ (ಪರ್ವತಗಳ ಎಡನಡುವೆಯಲ್ಲಿ) ಅಸಿತಾಂಗಭೈರವಾಯ, ರುರುಭೈರವಾಯ, ಚಂಡಭೈರವಾಯ, ಕ್ರೋಧಭೈರವಾಯ, ಉನ್ಮತ್ತಭೈರವಾಯ ॥ ಕಪಾಲಭೈರವಾಯ, ಭೀಷಣಭೈರವಾಯ, ಸಂಹಾರಭೈರವಾಯ ॥ ಇತಿ ಸಪ್ತಮಾವರಣಮ್ ॥ ಇಂದ್ರಾಯ, ಅಗ್ನಯೇ, ಯಮಾಯ, ನಿರ್ಋತಯೇ, ವರುಣಾಯ, ವಾಯವೇ, ಸೋಮಾಯ, ಈಶಾನಾಯ, ಅನಂತಾಯ, ಬ್ರಹ್ಮಣೇ ॥ ಇತ್ಯಷ್ಟಮಾವರಣಮ್ ॥ ೫೪ ॥ ವಜ್ರಾಯ, ಶಕ್ತಯೇ, ದಂಡಾಯ, ಖಡ್ಗಾಯ, ಪಾಶಾಯ, ಅಂಕುಶಾಯ, ಗದಾಯೈ, ತ್ರಿಶೂಲಾಯ, ಚಕ್ರಾಯ, ಪದ್ಮಾಯ ನಮಃ ॥ ಇತಿ ನವಮಾವರಣದೇವತಾಭ್ಯೋ ನಮಃ ಜಲಗಂಧಾದ್ಯುಪಚಾರಪೂಜಾಂ ಸಮರ್ಪಯಾಮಿ ॥ ಎಲೈ ಇಂದ್ರನೆ! ಇಲ್ಲಿ ಹೀಗೆ ನವಮಾವರಣಗಳು ಹೇಳಲ್ಪಟ್ಟವು ॥ ೫೫ ॥ ಇನ್ನು ಆಯಾವ ದೇವತೆ

ಯುದಿಹೋಚ್ಯತೇ ॥೫೬॥ ಶೇಷಪರ್ಯಂಕಶಯನಂ ಪೀತಕೌಶೇಯವಾಸಸಮ್ । ಶಂಖಚಕ್ರಗದಾಪದ್ಮಧಾರಿಣಂ ವನಮಾಲಿನಮ್ ॥ ॥ ೫೭ ॥ ಸ್ವತೇಜಸಾ ಪ್ರಜ್ವಲಂತಂ ಶಾಂತಂ ಸರ್ವೇಶ್ವರಂ ಹರಿಮ್ । ಶ್ಯಾಮಂ ಯೋಗಿಹೃದಾರಾಮಂ ವಂದೇ ಶ್ರೀಪುರುಷೋತ್ತಮಮ್ ॥ ॥ ೫೮ ॥ ಪದ್ಮಾಸನಸ್ಥಿತಾಂ ದೇವೀಂ ಪದ್ಮಮಿತ್ರಾಯುತಪ್ರಭಾಮ್ । ಪದ್ಮಜಾದಿಸ್ತುತಾಂ ಶಾಂತಾಂ ಪದ್ಮಪತ್ರಾಯತೇಕ್ಷಣಾಮ್ ॥ ೫೯ ॥ ಧೃತಪಾಶಾಂಕುಶಭೀತಿವರದಾಂ ಭೂತಿದಾಯಿನೀಮ್ । ಸಪೀತಾಂಬರಲಸದ್ಭೂಷಾಲಂಕೃತಾಂ ವಿಶ್ವಮೋಹಿನೀಮ್ ॥ ೬೦ ॥ ಸುವರ್ಣವರ್ಣಾಂ ಸೌಂದರ್ಯಜಿತಕೋಟಿರತಿಂ ಸತೀಮ್ । ಶ್ರೀಪದ್ಮನಾಭದಯಿತಾಂ ಮಹಾಲಕ್ಷ್ಮೀಂ ವಿಭಾವಯೇ ॥ ೬೧ ॥ ಸರಸ್ವತೀಂ ಶುಕ್ಲವರ್ಣಾಂ ಸಸ್ಮಿತಾಂ ಸುಮನೋಹರಾಮ್ । ಕೋಟಿ-

---

ಗಳ ಕೆಲವು ಧ್ಯಾನಗಳನ್ನು ಹೇಳಿ ಬಳಿಕ ಶ್ರೀಮಹಾಲಕ್ಷ್ಮಿಯ ಧ್ಯಾನ ಮೊದಲಾದುದನ್ನು ಹೇಳುವೆನು ॥ ೫೬ ॥ ಶೇಷನೆಂಬ ಮಂಚದೊಳಗೆ ಮಲಗಿರುವವನಾಗಿಯೂ, ಪೀತಾಂಬರವನ್ನುಟ್ಟವನಾಗಿಯೂ, ನಾಲ್ಕು ಕೈಗಳಿಂದ ಶಂಖಚಕ್ರಗದಾಪದ್ಮಗಳನ್ನು ಧರಿಸಿರುವವನಾಗಿಯೂ, ಕೊರಳಲ್ಲಿ ವನಮಾಲೆಯನ್ನು ಧರಿಸಿದವನಾಗಿಯೂ ॥ ೫೭ ॥ ತನ್ನ ತೇಜಸ್ಸಿನಿಂದಲೇ ಪ್ರಜ್ವಲಿಸುವವನಾಗಿಯೂ, ಶಾಂತನಾಗಿಯೂ, ಸರ್ವರಿಗೊಡೆಯನಾಗಿಯೂ, ಭಕ್ತರ ಪೀಡೆಯನ್ನು ಪರಿಹರಿಸುವವನಾಗಿಯೂ, ನೀಲವರ್ಣನಾಗಿಯೂ, ಯೋಗಿಗಳ ಹೃದಯದೊಳಗೆ ಕ್ರೀಡಿಸುವವನಾಗಿಯೂ, ಇರುವ ಶ್ರೀಪುರುಷೋತ್ತಮನನ್ನು ವಂದಿಸುವೆನು. ಇದು ವಿಷ್ಣುವಿನ ಧ್ಯಾನವು ॥ ೫೮ ॥ ಪದ್ಮಾಸನದೊಳು ಕುಳಿತಿರುವವಳಾಗಿಯೂ, ಹತ್ತು ಸಾವಿರ ಸೂರ್ಯರಂತೆ ಪ್ರಕಾಶವುಳ್ಳವಳಾಗಿಯೂ ॥ ೫೯ ॥ ನಾಲ್ಕು ಕೈಗಳಲ್ಲಿ ಪಾಶ ಅಂಕುಶ ಅಭಯ ವರದಗಳನ್ನು ಧರಿಸಿದಳಾಗಿಯೂ, ಐಶ್ವರ್ಯವನ್ನು ಕೊಡುವವಳಾಗಿಯೂ, ಪೀತಾಂಬರ ಪ್ರಶಸ್ತಗಳಾದ ಭೂಷಣಗಳಿಂದಲಂಕೃತಳಾಗಿಯೂ, ಜಗತ್ತನ್ನು ಮೋಹಿಸುವವಳಾಗಿಯೂ ॥ ೬೦ ॥ ಭಂಗಾರದಂತೆ ದೇಹವರ್ಣವುಳ್ಳವಳಾಗಿಯೂ, ತನ್ನ ಸೌಂದರ್ಯದಿಂದ ಕೋಟಿರತಿಯರನ್ನು ಜಯಿಸಿದವಳಾಗಿಯೂ, ಪತಿವ್ರತೆಯಾಗಿಯೂ ಇರುವ, ಶ್ರೀಪದ್ಮನಾಭನ ಪ್ರಿಯಳಾದ ಮಹಾಲಕ್ಷ್ಮಿಯನ್ನು ಭಾವಿಸುವೆನು. ಇದು ಲಕ್ಷ್ಮೀಧ್ಯಾನವು ॥ ೬೧ ॥ ಶುಭ್ರವರ್ಣಳಾ

ಚಂದ್ರಪ್ರಭಾಮುಷ್ಟಪುಷ್ಟಶ್ರೀಯುಕ್ತವಿಗ್ರಹಾಮ್ ॥ ೬೨ ॥ ವಹ್ನಿಶುದ್ಧಾಂ ಶುಕಾಧಾನಾಂ ವೀಣಾಪುಸ್ತಕಧಾರಿಣೀಮ್ । ರತ್ನಸಾರೇಂದ್ರನಿರ್ಮಾಣನವಭೂಷಣಭೂಷಿತಾಮ್ ॥ ೬೩ ॥ ಸುಪೂಜಿತಾಂ ಸುರಗಣೈರ್ಬ್ರಹ್ಮವಿಷ್ಣುಶಿವಾದಿಭಿಃ । ವಂದೇ ಭಕ್ತ್ಯಾ ವಂದಿತಾಂ ಚ ಮುನೀಂದ್ರಮನುಮಾನವೈಃ ॥ ೬೪ ॥ ಸದಾ ರಕ್ಷತು ನೋ ದೇವೀ ಸರ್ವಲೋಕವಿಮೋಹಿನೀ । ಖಡ್ಗಪಾತ್ರಶಿರಃಖೇಟೈರಲಂಕೃತಚತುರ್ಭುಜಾ ॥ ೬೫ ॥ ತನುಮಧ್ಯಾ ಸುವಿಸ್ತಾರನಯನತ್ರಿತಯಾನ್ವಿತಾ । ಕಬಂಧಹಾರಂ ಶಿರಸಾ ಬಿಭ್ರಾಣಾಹಿಶಿರಸ್ರಜಮ್ ॥ ೬೬ ॥ ಅಂಜನಾದ್ರಿಸಮಾನಾಭಾ ದಂಷ್ಟ್ರಾಂಚಿತವರಾನನಾ । ಸರ್ವದೇವಾರ್ಚಿತಾ ನಿತ್ಯಂ ಮಹಾಕಾಲೀ ವರಪ್ರದಾ ॥ ೬೭ ॥ ಪಂಚವಕ್ತ್ರಂ ತ್ರಿನೇತ್ರಂ ಚ

---

ಗಿಯೂ, ಕಿರುನಗೆಯಿಂದ ಕೂಡಿರುವವಳಾಗಿಯೂ, ಅತಿಸುಂದರಿಯಾಗಿಯೂ, ಕೋಟಿಚಂದ್ರರ ಪ್ರಭೆಗಳನ್ನಪಹರಿಸಲ್ಪಟ್ಟು ತುಂಬಿರುವ ಕಾಂತಿಯಿಂದ ಸಮೇತವಾದ ದೇಹವುಳ್ಳವಳಾಗಿಯೂ ॥ ೬೨ ॥ ಪೀತಾಂಬರವನ್ನುಟ್ಟವಳಾಗಿಯೂ, ಕೈಗಳಲ್ಲಿ ವೀಣೆಪುಸ್ತಕಗಳನ್ನು ಧರಿಸಿದವಳಾಗಿಯೂ, ಅತ್ಯುತ್ತಮರತ್ನಗಳಿಂದ ನಿರ್ಮಿಸಲ್ಪಟ್ಟ ನವೀನ ಆಭರಣಗಳಿಂದಲಂಕೃತಳಾಗಿಯೂ ॥೬೩॥ ಬ್ರಹ್ಮ ವಿಷ್ಣು ಶಿವಾದಿ ಸಮಸ್ತದೇವತೆಗಳಿಂದ ಪೂಜಿಸತಕ್ಕವಳಾಗಿಯೂ, ಮಹರ್ಷಿಗಳಿಂದಲೂ, ಮನುಗಳಿಂದಲೂ, ಮನುಷ್ಯರಿಂದಲೂ ವಂದಿಸಲ್ಪಡತಕ್ಕವಳಾಗಿಯೂ, ಇರುವ ಸರಸ್ವತಿಯನ್ನು ಭಕ್ತಿಯಿಂದ ವಂದಿಸುವೆನು. ಇದು ಸರಸ್ವತಿಯ ಧ್ಯಾನವು ॥ ೬೪ ॥ ಸಕಲ ಜಗತ್ತನ್ನು ಮೋಹಿಸುವವಳಾಗಿಯೂ, ಖಡ್ಗ, ಪಾನಪಾತ್ರ, ಶಿರಸ್ಸು, ಖೇಟಗಳಿಂದಲಂಕರಿಸಲ್ಪಟ್ಟ ನಾಲ್ಕು ತೋಳುಗಳುಳ್ಳವಳಾಗಿಯೂ ॥ ೬೫ ॥ ಸಣ್ಣ ನಡುವುಳ್ಳವಳಾಗಿಯೂ, ಅತಿ ವಿಸ್ತಾರವಾದ ಮೂರು ಕಣ್ಣುಗಳುಳ್ಳವಳಾಗಿಯೂ, ಮುಂಡಗಳ ಹಾರವನ್ನೂ, ಶಿರೋಮಾಲೆಯನ್ನೂ ಶಿರಸ್ಸಿನಿಂದ ಧರಿಸಿದವಳಾಗಿಯೂ ॥ ೬೬ ॥ ಅಂಜನಪರ್ವತಕ್ಕೆ ಸಮಾನವಾದ ಕಾಂತಿಯುಳ್ಳವಳಾಗಿಯೂ, ದಾಡೆಗಳಿಂದ ಶೋಭಿಸಲ್ಪಟ್ಟ ಮುಖಕಮಲವುಳ್ಳವಳಾಗಿಯೂ, ಯಾವಾಗಲೂ ಸಕಲ ದೇವತೆಗಳಿಂದ ಪೂಜಿಸತಕ್ಕವಳಾಗಿಯೂ, ವರಗಳನ್ನತಿಶಯವಾಗಿ ಕೊಡುವವಳಾಗಿಯೂ ಇರುವ, ಮಹಾಕಾಳಿಯೂ ಸರ್ವದಾ ನಮ್ಮನ್ನು ರಕ್ಷಿಸಲಿ. ಇದು ಮಹಾಕಾಳಿಯ ಧ್ಯಾನವು ॥ ೬೭ ॥ ಐದು ಮುಖಗಳುಳ್ಳವನಾಗಿಯೂ

**ಶುದ್ಧಸ್ಫಟಿಕಸನ್ನಿಭಮ್ । ವರಾಭಯಮಪರಶ್ಮೇಣಪಾಣಿಂ ಕೋಟಿರವಿಪ್ರಭಮ್ ॥ ೬೮ ॥ ಸರ್ವಾಂಗಸುಂದರಂ ನಿತ್ಯಂ ಷೋಡಶಾಬ್ದಂ ಜಗದ್ಗುರುಮ್ । ಭಕ್ತಕಲ್ಪದ್ರುಮಂ ಶಾಂತಂ ವಂದೇ ಶ್ರೀಪರಮೇಶ್ವರಮ್ ॥ ೬೯ ॥ ಸಹಪತ್ನ್ಯಾ ಸಹಸ್ರಾರಮಹಾಪದ್ಮವಿಹಾರಿಣೀಮ್ । ಚತುರ್ಭುಜಾಂ ತ್ರಿನಯನಾಂ ವಿದ್ಯುತ್ಕೋಟಿಸಮಪ್ರಭಾಮ್ ॥೭೦॥ ಶಂಖಚಕ್ರವರಾಭೀತೀರ್ಬಿಭ್ರತೀಮತಿಸುಂದರೀಮ್ । ಜ್ವಲನ್ಮಕುಟತಾಟಂಕಕಾಂಚೀಹಾರಾದಿರಂಜಿತಾಮ್ ॥ ೭೧ ॥ ಪೀತಾಂಬರಧರಾಮಂಬಾಂ ಹೇಮಾಭಾಂ ಕಾಮದಾಂ ಶಿವಾಮ್ । ಶ್ರೀಮನ್ಮಹೇಶಮಹಿಷೀಂ ಮಹಾಲಕ್ಷ್ಮೀಮಹಂ ಭಜೇ ॥ ೭೨ ॥ ಆಗಚ್ಛ ಸಚ್ಚಿದಾ-**

---

ಒಂದೊಂದು ಮುಖಕ್ಕೆ ಮೂರು ಮೂರು ಕಣ್ಣುಗಳುಳ್ಳವನಾಗಿಯೂ, ಸ್ವಚ್ಛವಾದ ಸ್ಫಟಿಕದಂತೆ ದೇಹವರ್ಣದವನಾಗಿಯೂ, ನಾಲ್ಕು ಕೈಗಳಲ್ಲಿ ವರದ ಅಭಯ ಪರಶು ಮೃಗಗಳುಳ್ಳವನಾಗಿಯೂ, ಕೋಟಿಸೂರ್ಯರಂತೆ ಪ್ರಕಾಶವುಳ್ಳವನಾಗಿಯೂ ॥ ೬೮ ॥ ಅತಿ ಸುಂದರನಾಗಿಯೂ, ಸರ್ವದಾ ಷೋಡಶ ಪ್ರಾಯಭರಿತನಾಗಿಯೂ, ಜಗತ್ತಿಗೆ ತಂದೆಯಾಗಿಯೂ, ಭಕ್ತರಿಗೆ ಕಲ್ಪವೃಕ್ಷದಂತಿರುವವನಾಗಿಯೂ, ಶಾಂತನಾಗಿಯೂ ಇರುವ, ಶ್ರೀಪರಮೇಶ್ವರನನ್ನು ವಂದಿಸುವೆನು. ಇದು ಮಹೇಶನ ಧ್ಯಾನವು ॥ ೬೯ ॥ ಪತಿಸಮೇತಳಾಗಿ ಸಹಸ್ರದಳಗಳುಳ್ಳ ಮಹಾಪದ್ಮದೊಳಗೆ ಕ್ರೀಡಿಸುವವಳಾಗಿಯೂ, ನಾಲ್ಕು ತೋಳುಗಳುಳ್ಳವಳಾಗಿಯೂ, ತ್ರಿನೇತ್ರೆಯಾಗಿಯೂ, ಕೋಟಿಮಿಂಚುಗಳಷ್ಟು ದೇಹಕಾಂತಿಯುಳ್ಳವಳಾಗಿಯೂ ॥ ೭೦ ॥ ಶಂಖ ಚಕ್ರ ವರದ ಅಭಯಗಳನ್ನು ಧರಿಸಿದವಳಾಗಿಯೂ, ಅತ್ಯಂತ ಸುಂದರಿಯಾಗಿಯೂ, ಝಗಝಗಿಪ ಕಿರೀಟ ಓಲೆ ವಡ್ಯಾಣ ಪದಕ ಮೊದಲಾದ ಭೂಷಣಗಳಿಂದ ಶೋಭಿತಳಾಗಿಯೂ ॥ ೭೧ ॥ ಪೀತಾಂಬರವನ್ನುಟ್ಟವಳಾಗಿಯೂ, ಜಗತ್ತಿಗೆ ತಾಯಿಯಾಗಿಯೂ, ಭಂಗಾರದಂತೆ ಮೈಬಣ್ಣವುಳ್ಳವಳಾಗಿಯೂ, ಇಚ್ಛಿಸುವ ಪದಾರ್ಥಗಳನ್ನು ಕೊಡುವವಳಾಗಿಯೂ, ಜಗನ್ಮಂಗಲೆಯಾಗಿಯೂ ಇರುವ ಸಂಪದ್ವಿಶಿಷ್ಟನಾದ ಮಹೇಶನ ಪಟ್ಟರಾಜ್ಞಿಯಾದ ಶ್ರೀಮಹಾಲಕ್ಷ್ಮಿಯನ್ನು ನಾನು ಭಜಿಸುವೆನು. ಇದು ಮೂಕಾಂಬಿಕೆಯ ಧ್ಯಾನವು. ಇಲ್ಲಿ ಯಾವ ದೇವತೆಯು ಪೂಜೆಗೆ ಸಂಕಲ್ಪಿಸಲ್ಪಟ್ಟಿರುವುದೋ ಆ ದೇವತೆಯ ಧ್ಯಾನವನ್ನು ಹೇಳಿ ಬಳಿಕ ಮೇಲೆ ಹೇಳುವ ಆಗಚ್ಛ ಇತ್ಯಾದಿ ಷೋಡಶೋಪಚಾರಗಳಿಂದ ಪೂಜಿಸತಕ್ಕದ್ದು

**ನಂದಮೂರ್ತೇ ಶ್ರೀಪರಮೇಶ್ವರಿ । ಗೃಹಾಣ ಸಹಪತ್ಯಾ ತ್ವಮಿಮಾಂ ಪೂಜಾಂ ಸಭಕ್ತಿಕಾಮ್ ॥ ೭೩ ॥ ವಿಚಿತ್ರಂ ವಜ್ರಮಾಣಿಕ್ಯಮುಕ್ತಾ-ರತ್ನಾದಿರಂಜಿತಮ್ । ಹೇಮಸಿಂಹಾಸನಂ ಚಾರು ಪ್ರೀತ್ಯರ್ಥಂ ಪ್ರತಿ-ಗೃಹ್ಯತಾಮ್ ॥ ೭೪ ॥ ಅಜ್ಞಾನಧ್ವಾಂತವಿಧ್ವಂಸತರಣೇ ಕರುಣಾ-ನಿಧೇ । ಕೃತಾಂಜಲಿಪುಟಿಸ್ತುಭ್ಯಂ ಸ್ವಾಗತೋಕ್ತಿಂ ನಿವೇದಯೇ ॥ ॥ ೭೫ ॥ ಸ್ವರ್ಣಪಾತ್ರಸ್ಥಿತಂ ತೋಯಂ ದಿವ್ಯಸೌರಭ್ಯಸಂಯುತಮ್ । ಸಮರ್ಪಯಾಮ್ಯಹಂ ಪಾದ್ಯಂ ಸಮ್ಯಕ್ ಸ್ವೀಕ್ರಿಯತಾಂ ತ್ವಯಾ ॥ ॥ ೭೬ ॥ ಶುದ್ಧಗಂಧಾಕ್ಷತಫಲಕುಶಾಗ್ರಕುಸುಮಾನ್ವಿತಮ್ । ಅರ್ಘ್ಯಂ ಸಮರ್ಪಿತಂ ಪ್ರೀತ್ಯಾ ಪ್ರತಿಗೃಹ್ಣೀಷ್ವ ಸಾಂಪ್ರತಮ್ ॥ ೭೭ ॥ ಸುಸಂಸ್ಕೃತಂ ದಧಿಕ್ಷೀರಮಧ್ವಾಜ್ಯಸಲಿಲಾತ್ಮಕಮ್ । ಮಧುಪರ್ಕ-**

---

॥ ೭೨ ॥ ಎಲೈ ಸಚ್ಚಿದಾನಂದಮೂರ್ತಿಯಾದ ಶ್ರೀಪರಮೇಶ್ವರಿಯೆ! ನೀನು ಇಲ್ಲಿ ಬಾ. ಪತಿಯಿಂದ ಸಹಿತಳಾಗಿ ನನ್ನಿಂದ ರಚಿಸಲ್ಪಡತಕ್ಕ ಈ ಭಕ್ತಿಸಹಿತವಾದ ಪೂಜೆಯನ್ನು ಸ್ವೀಕರಿಸು. ಪುರುಷದೇವತಾ ಪೂಜಾವಿಷಯದಲ್ಲಿ 'ಆಗಚ್ಛ ಸಚ್ಚಿದಾನಂದಮೂರ್ತೇ ಶ್ರೀಪರಮೇಶ್ವರ । ಗೃಹಾಣ ಸಹ ಪತ್ನ್ಯಾ ತ್ವಮಿಮಾಂ ಪೂಜಾಂ ಸಭಕ್ತಿಕಾಮ್ ॥' ಪರಮೇಶ್ವರ ಎಂಬಲ್ಲಿಯೂ ಪುರುಷೋತ್ತಮ ಗಣನಾಯಕ ಇತ್ಯಾದಿ ಯೋಜಿಸತಕ್ಕದ್ದು ॥ ೭೩ ॥ ನಾನಾ ನಮೂನೆಯಾಗಿಯೂ, ವಜ್ರಮಾಣಿಕ್ಯಮೌಕ್ತಿಕ ರತ್ನಾದಿಗಳಿಂದ ಪ್ರಜ್ವಲಿಸುವುದಾಗಿಯೂ, ಮನೋಹರವಾಗಿಯೂ ಇರುವ ಭಂಗಾರದ ಸಿಂಹಾಸನವು ಸಂತೋಷಾರ್ಥವಾಗಿ ನಿನ್ನಿಂದ ಸ್ವೀಕರಿಸಲ್ಪಡಲಿ ॥ ೭೪ ॥ ಅಜ್ಞಾನವೆಂಬ ಕತ್ತಲೆಯ ನಾಶವಿಷಯದಲ್ಲಿ ಸೂರ್ಯನಂತಿರುವ ಎಲೈ ಕರುಣಾಕರೆಯಾದ ಮಹಾಲಕ್ಷ್ಮಿಯೆ! ನಿನಗೋಸ್ಕರ ಕೈಮುಗಿದು ಸುಖದಿಂದ ಬರೋಣಾಯಿತೆ ಎಂಬ ಸ್ವಾಗತೋಕ್ತಿಯನ್ನರಿಕೆ ಮಾಡುವೆನು ॥ ೭೫ ॥ ದಿವ್ಯಪರಿಮಳದಿಂದ ಕೂಡಿರುವ, ಭಂಗಾರದ ತಂಬಿಗೆಯಲ್ಲಿ ತುಂಬಿದ್ದ, ಪಾದಪ್ರಕ್ಷಾಲನಾರ್ಥವಾದ ನೀರೆಂಬ ಪಾದ್ಯವನ್ನು ಸಮರ್ಪಿಸುವೆನು. ಇದು ಸಂತೋಷದಿಂದ ನಿನ್ನಿಂದ ಸ್ವೀಕರಿಸಲ್ಪಡಲಿ ॥ ೭೬ ॥ ಶುದ್ಧವಾದ ಗಂಧ ಅಕ್ಷತೆ ಶೀಯಾಳದ ನೀರು ದರ್ಭೆಯ ಕುಡಿಗಳು ಪುಷ್ಪಗಳು ಇವುಗಳಿಂದ ಕೂಡಿರುವ ಅರ್ಘ್ಯವು ಸಮರ್ಪಿಸಲ್ಪಟ್ಟಿದೆ. ಇದನ್ನೀಗ ಪ್ರೀತಿಯಿಂದ ಸ್ವೀಕರಿಸು ॥ ೭೭ ॥ ವಿಧಿಯಂತೆ ಸಂಸ್ಕರಿಸಲ್ಪಟ್ಟದ್ದಾಗಿಯೂ, ಮೊಸರು, ಹಾಲು, ಜೇನುತುಪ್ಪ, ತುಪ್ಪ, ನೀರು, ಇವು

ಮಿಮಂ ಸಮ್ಯಕ್ ಸ್ವೀಕುರುಷ್ವ ಮಯಾರ್ಪಿತಮ್ ॥ ೭೮ ॥ ಏಲಾ-
ಲವಂಗಕರ್ಪೂರಚಂದನಾದ್ಯೈಃ ಸುವಾಸಿತಮ್ । ಪಾನೀಯಂ
ನಿರ್ಮಲಂ ಚೈತದ್ಗೃಹಾಣಾಚಮನೀಯಕಮ್ ॥ ೭೯ ॥ ಗೋಕ್ಷೀರ-
ದಧ್ಯಾಜ್ಯಮಧುಶರ್ಕರಾಂಗಂ ಸುಮಂತ್ರಕಮ್ । ಪಂಚಾಮೃತಂ
ಮಯಾ ದತ್ತಂ ಸ್ನಾನಾರ್ಥಂ ಪ್ರತಿಗೃಹ್ಯತಾಮ್ ॥ ೮೦ ॥ ಗಂಗಾ-
ಸೌಪರ್ಣಿಕಾತುಂಗಾವರದಾದಿನದೀಭವೈಃ । ಶುದ್ಧೋದಕೈರ್ವೇದ-
ಸೂಕ್ತಯುಕ್ತೈಸ್ತ್ವಾಂ ಸ್ನಾಪಯಾಮ್ಯಹಮ್ ॥ ೮೧ ॥ ಬಹುಮೂ-
ಲ್ಯಂ ಚ ಕೌಶೇಯಂ ದುಕೂಲಂ ಸೋತ್ತರೀಯಕಮ್ । ಸಮರ್ಪಿತ-
ಮಿದಂ ವಸ್ತ್ರಂ ಗೃಹಾಣ ಭುವನಾರಣೇ ॥ ೮೨ ॥ ತಪ್ತಕಾರ್ತಸ್ವರ-
ಕೃತಂ ಯಜ್ಞಸೂತ್ರಮನುತ್ತಮಮ್ । ಪ್ರಯಚ್ಛಾಮ್ಯಹಮೇತೇನ
ದೇಹಿ ಮೇ ಜ್ಞಾನಮುತ್ತಮಮ್ ॥ ೮೩ ॥ ರತ್ನಕುಂಡಲಕೇಯೂರ-
ಕಿರೀಟಪದಕಾನ್ವಿತಮ್ । ಗೃಹೀಷ್ವಾಭರಣಂ ರಮ್ಯಮೂರ್ಮಿಕಾದಿ-

---

ಗಳ ರೂಪವಾಗಿಯೂ, ಇರುವ ಈ ನನ್ನಿಂದ ಸಮರ್ಪಿಸಲ್ಪಟ್ಟ ಮಧು ಪರ್ಕವನ್ನು ಸಂತೋಷದಿಂದ ಸ್ವೀಕರಿಸು ॥ ೭೮ ॥ ಏಲಕ್ಕಿ, ಚಂದನ, ಪಚ್ಚೆ ಕರ್ಪೂರ, ಲವಂಗ ಮೊದಲಾದುವುಗಳಿಂದ ಘಮಘಮಿಸುವುದಾಗಿಯೂ, ಸ್ವಚ್ಛ ವಾಗಿಯೂ ಇರುವ ಆಚಮನಕ್ಕೆ ಯೋಗ್ಯವಾದ ನೀರನ್ನು ಸ್ವೀಕರಿಸು ॥ ೭೯ ॥ ಆಕಳಹಾಲು, ಮೊಸರು, ತುಪ್ಪ, ಜೇನುತುಪ್ಪ ಸಕ್ಕರೆಗಳೇ ಅಂಗಗಳಾಗಿಯೂ ಮಂತ್ರಪೂರ್ವಕವಾಗಿಯೂ ಇರುವ, ನನ್ನಿಂದ ಸಮರ್ಪಿಸಲ್ಪಟ್ಟ ಪಂಚಾ ಮೃತವು ಸ್ನಾನಕ್ಕೋಸ್ಕರ ಸ್ವೀಕರಿಸಲ್ಪಡಲಿ ॥ ೮೦ ॥ ಗಂಗಾ ಸೌಪರ್ಣಿಕಾ ತುಂಗಾ ವರದಾ ನದಿಗಳೇ ಮೊದಲಾದವುಗಳುದ್ಭವಿಸಿದುದಾಗಿಯೂ, ವೇದ ಸೂಕ್ತಗಳಿಂದ ಕೂಡಿರುವುದಾಗಿಯೂ ಇರುವ, ಶುದ್ಧೋದಕಗಳಿಂದ ನಿನ್ನನ್ನು ಸ್ನಾನಮಾಡಿಸುವೆನು ॥ ೮೧ ॥ ಎಲೈ ಜಗತ್ತಿಗೆ ಉತ್ಪತ್ತಿಸ್ಥಾನಭೂತಳಾದ ಮಹಾಲಕ್ಷ್ಮಿಯೆ! ಬಹಳ ಬೆಲೆಯುಳ್ಳದ್ದಾಗಿಯೂ, ಪಟ್ಟೆಯದ್ದಾಗಿಯೂ ಇರುವ, ಹೊದೆಯತಕ್ಕುದರಿಂದ ಕೂಡಿರುವ, ಉಡತಕ್ಕ ವಸ್ತ್ರವು ಸಮರ್ಪಿಸ ಲ್ಪಟ್ಟಿದೆ, ಇದನ್ನು ಸ್ವೀಕರಿಸು ॥ ೮೨ ॥ ಪುಟಹಾಕಿದ ಭಂಗಾರದಿಂದ ನಿರ್ಮಿಸ ಲ್ಪಟ್ಟ ಅತ್ಯುತ್ತಮವಾದ ಉಪವೀತವನ್ನು ನಾನು ಸಮರ್ಪಿಸುವೆನು. ಇದರಿಂದ ನನಗೆ ಶ್ರೇಷ್ಠವಾದ ಜ್ಞಾನವನ್ನು ಕೊಡು ॥ ೮೩ ॥ ರತ್ನಖಚಿತಗಳಾದ ಕರ್ಣ ಕುಂಡಲ ಭುಜಕೀರ್ತಿ ಕಿರೀಟಪದಕಗಳಿಂದಲೂ, ಮತ್ತು ಉಂಗುರ ಮೊದಲಾ

ಯುತಂ ಪುನಃ ॥ ೮೪ ॥ ಮಲಯಾದ್ರಿಸಮುದ್ಭೂತಂ ಕಾಲಾಗರುವಿಮಿಶ್ರಿತಮ್ । ಗಂಧಂ ದದಾಮಿ ಲೇಪಾರ್ಥಂ ಕಸ್ತೂರೀಕುಂಕುಮಾನ್ವಿತಮ್ ॥ ೮೫ ॥ ಮುಕ್ತಾಫಲಪ್ರತೀಕಾಶೈರ್ಹರಿದ್ರಾಚೂರ್ಣಮಿಶ್ರಿತೈಃ । ಶಾಲೀಯೈ ರಮಣೀಯೈಸ್ತ್ವಾಮಕ್ಷತೈರರ್ಚಯಾಮ್ಯಹಮ್ ॥ ೮೬ ॥ ಚಂಪಕಾಶೋಕಮಂದಾರಮಲ್ಲಿಕಾದ್ರೋಣಸಂಯುತೈಃ । ಪುಷ್ಪೈಃ ಸಂಪೂಜಯಾಮಿ ತ್ವಾಂ ಬಿಲ್ವಪತ್ರೈಶ್ಚ ಕೋಮಲೈಃ ॥ ೮೭ ॥ ವನಸ್ಪತಿರಸೋತ್ಪನ್ನೋ ಗಂಧಾಢ್ಯೋ ಧೂಪ ಉತ್ತಮಃ । ಆಘ್ರೇಯಃ ಸರ್ವದೇವಾನಾಂ ಧೂಪೋಽಯಂ ಪ್ರತಿಗೃಹ್ಯತಾಮ್ ॥ ೮೮ ॥ ಸಾಜ್ಯಂ ತ್ರಿವರ್ತಿಸಂಯುಕ್ತಂ ವಹ್ನಿನಾ ಯೋಜಿತಂ ಮಯಾ । ಗೃಹಾಣ ಮಂಗಲಂ ದೀಪಂ ತ್ರೈಲೋಕ್ಯತಿಮಿರಾಪಹಮ್ ॥ ೮೯ ॥ ಶಾಲ್ಯೋದನಘೃತಾಪೂಪಪಾಯಸಾದಿಸಮನ್ವಿತಮ್ । ಮಧ್ಯೇ ಪಾನೀಯಸಂಯುಕ್ತಂ ನೈವೇದ್ಯಂ ಪ್ರತಿ-

---

ದುವುಗಳಿಂದಲೂ ಕೂಡಿರುವ ಮನೋಹರವಾದ ಆಭರಣವನ್ನು ಸ್ವೀಕರಿಸು ॥ ೮೪ ॥ ಮಲಯಾಚಲದಲ್ಲಿ ಉಂಟಾದದ್ದಾಗಿಯೂ, ಕರಿಅಗರಿನಿಂದ ಮಿಶ್ರ ಮಾಡಿದ್ದಾಗಿಯೂ, ಇರುವ ಕಸ್ತೂರಿ ಕುಂಕುಮ ಕೇಸರಿಗಳಿಂದ ಕೂಡಿರುವಂಥ ಗಂಧವನ್ನು ಹಚ್ಚಿಕೊಳ್ಳುವುದಕ್ಕೋಸ್ಕರ ಕೊಡುವೆನು ॥ ೮೫ ॥ ಮುತ್ತುಗಳಂತಿರುವುದಾಗಿಯೂ, ಅರಸಿನ ಪುಡಿಗಳಿಂದ ಮಿಶ್ರಮಾಡಿದ್ದಾಗಿಯೂ, ಮನೋಹರಗಳಾಗಿಯೂ ಇರುವ ಸಣ್ಣಕ್ಕಿಯಕ್ಷತೆಗಳಿಂದ ನಿನ್ನನ್ನರ್ಚಿಸುವೆನು ॥ ೮೬ ॥ ಸಂಪಿಗೆ ಅಶೋಕ ಮಂದಾರ ಮಲ್ಲಿಗೆ ತುಂಬೆಗಳ ಹೂವುಗಳಿಂದ ಸಮೇತವಾಗಿರುವ ಪುಷ್ಪಗಳಿಂದಲೂ, ಕೋಮಲಗಳಾದ ಬಿಲ್ವಪತ್ರಗಳಿಂದಲೂ, ನಿನ್ನನ್ನು ಚೆನ್ನಾಗಿ ಪೂಜಿಸುವೆನು ॥ ೮೭ ॥ ವನಸ್ಪತಿಗಳ ರಸಗಳಿಂದುಂಟಾದ್ದಾಗಿಯೂ, ಪರಿಮಳಯುಕ್ತವಾಗಿಯೂ, ಹೊಗೆಯುಳ್ಳದ್ದಾಗಿಯೂ, ಸಕಲ ದೇವತೆಗಳಿಗೂ ಆಘ್ರಾಣಿಸತಕ್ಕದ್ದಾಗಿಯೂ, ಇರುವ ಈ ಶ್ರೇಷ್ಠವಾದ ಧೂಪವು ಸ್ವೀಕರಿಸಲ್ಪಡಲಿ ॥ ೮೮ ॥ ತುಪ್ಪ ಮೂರು ಬತ್ತಿ ಬೆಂಕಿ ಈ ಮೂರರಿಂದ ಯುಕ್ತವಾದ್ದಾಗಿಯೂ, ಮೂರು ಲೋಕದ ಕತ್ತಲೆಯನ್ನಪಹರಿಸತಕ್ಕದ್ದಾಗಿಯೂ ಇರುವ ಈ ಮಂಗಲದೀಪವನ್ನು ಸ್ವೀಕರಿಸು ॥ ೮೯ ॥ ಸಣ್ಣಕ್ಕಿಯನ್ನ, ತುಪ್ಪ, ಖಜ್ಜಾಯ, ಪಾಯಸ ಮೊದಲಾದುವುಗಳಿಂದ ಸಹಿತವಾಗಿಯೂ, ಮಧ್ಯೇ ಮಧ್ಯೇ ಗಂಗೋದಕದಿಂದ ಸಹಿತವಾಗಿಯೂ, ಇರುವ

**ಗೃಹ್ಯತಾಮ್ ॥ ೯೦ ॥ ಪೂಗೀಫಲಸಮಾಯುಕ್ತಂ ನಾಗವಲ್ಲೀದಲೈ-ರ್ಯುತಮ್ । ಚೂರ್ಣಕರ್ಪೂರಸಂಯುಕ್ತಂ ತಾಂಬೂಲಂ ಪ್ರತಿ-ಗೃಹ್ಯತಾಮ್ ॥ ೯೧ ॥ ನಾನಾವಿಧೈರಾರತಿಕೈಃ ಪುರಂಧ್ರೀಭಿರ್ವಿ-ನಿರ್ಮಿತೈಃ । ನೀರಾಜಯಾಮಿ ತ್ವಾಮದ್ಯ ವಿಚಿತ್ರೈರ್ಮಂಗಲಾತ್ಮಕೈಃ ॥ ॥ ೯೨ ॥ ಮಲ್ಲಿಕಾತುಲಸೀಬಿಲ್ವಕಮಲೈರುಪಕಲ್ಪಿತಮ್ । ಮಂತ್ರ-ಪುಷ್ಪಂ ಪ್ರಯಚ್ಛಾಮಿ ತವ ಪ್ರೀತಿವಿವೃದ್ಧಯೇ ॥ ೯೩ ॥ ಯತ್ಪ್ರದ-ಕ್ಷಿಣತೋಽಶೇಷಭೂಪ್ರದಕ್ಷಿಣಜಂ ಫಲಮ್ । ಕುರ್ವೇ ತದ್ದೇವತಾ-ಯಾಸ್ತೇ ಪ್ರದಕ್ಷಿಣಮನನ್ಯಧೀಃ ॥ ೯೪ ॥ ನಮಸ್ತೇಽನಂತರುಚಯೇ ನಮಸ್ತೇಽನಂತಶಕ್ತಯೇ । ಅಶೇಷಭುವನಾಧಾರಮೂರ್ತಯೇ-ಽಮೂರ್ತಯೇ ನಮಃ ॥ ೯೫ ॥ ಆಯುರ್ಲಕ್ಷ್ಮೀಂ ಸುಖಂ ವಿದ್ಯಾಂ ಸರ್ವತ್ರ ವಿಜಯಂ ಪುನಃ । ತ್ವತ್ಪಾದಕಮಲೇಽತ್ಯಂತಂ ಭಕ್ತಿಂ ಮೇ ದೇಹಿ ಸಂತತಮ್ ॥ ೯೬ ॥ ಪೂಜಾಸಂಪೂರ್ಣಫಲದಂ ಯಶೋ-**

---

ಈ ನೈವೇದ್ಯವು ಸ್ವೀಕರಿಸಲ್ಪಡಲಿ ॥ ೯೦ ॥ ಅಡಿಕೆ ನಾಗಬಳ್ಳಿಯೆಲೆ ಸುಣ್ಣ ಪಚ್ಚಕರ್ಪೂರಗಳಿಂದ ಸಹಿತವಾದ ಈ ತಾಂಬೂಲವು ಸ್ವೀಕರಿಸಲ್ಪಡಲಿ॥೯೧॥ ಅತ್ಯಾಶ್ಚರ್ಯಕರಗಳಾಗಿಯೂ, ಪತಿವ್ರತೆಯರಿಂದ ನಿರ್ಮಿಸಲ್ಪಟ್ಟವುಗಳಾ ಗಿಯೂ, ಬಹುಪ್ರಕಾರಗಳಾಗಿಯೂ, ಇರುವ ಈ ಮಂಗಲಸ್ವರೂಪಗಳಾದ ಆರತಿಗಳಿಂದ ನಿನ್ನನ್ನೀಗ ಬೆಳಗುವೆನು ॥ ೯೨ ॥ ಮಲ್ಲಿಗೆಹೂವು ತುಲಸೀ ಬಿಲ್ವಪತ್ರ ತಾವರೆ ಹೂವುಗಳಿಂದ ಕಲ್ಪಿಸಲ್ಪಟ್ಟ ಮಂತ್ರಪುಷ್ಪವನ್ನು ನಿನಗೆ ಪ್ರೀತಿಯು ಹೆಚ್ಚಲೋಸ್ಕರ ಸಮರ್ಪಿಸುವೆನು ॥ ೯೩ ॥ ಯಾವುದಕ್ಕೋಸ್ಕರ ನಿನ್ನ ಪ್ರದಕ್ಷಿಣ ಮಾಡುವುದರಿಂದ ಸಕಲ ಭೂಪ್ರದಕ್ಷಿಣದಿಂದುಂಟಾಗುವ ಫಲವು ದೊರೆಯುವುದೋ, ಆದುದರಿಂದ ಇಷ್ಟದೇವತೆಯಾದ ನಿನ್ನ ಪ್ರದಕ್ಷಿಣ ವನ್ನು ಅನ್ಯರಲ್ಲಿ ಬುದ್ಧಿಯುಳ್ಳವನಾಗದೆ ಮಾಡುವೆನು ॥ ೯೪ ॥ ಅನಂತತೇಜ ಸ್ಸುಳ್ಳವಳಾಗಿಯೂ, ಅನಂತಶಕ್ತಿಯುಳ್ಳವಳಾಗಿಯೂ, ಸಮಸ್ತಬ್ರಹ್ಮಾಂಡ ಗಳಿಗಾಧಾರಭೂತವಾದ ದೇಹವುಳ್ಳವಳಾಗಿಯೂ, ದೇಹವಿಲ್ಲದವಳಾಗಿಯೂ, ಇರುವ ನಿನಗೋಸ್ಕರ ನಮಸ್ಕಾರವು ॥ ೯೫ ॥ ಆಯುಷ್ಯ ಐಶ್ವರ್ಯ ಸೌಖ್ಯ ವಿದ್ಯೆ ಸರ್ವತ್ರ ಜಯಗಳನ್ನು, ಮತ್ತು ನಿರಂತರವಾಗಿ ನಿನ್ನ ಪಾದಕಮಲದಲ್ಲಿ ಹೆಚ್ಚಾದ ಭಕ್ತಿಯನ್ನು, ನನಗೆ ಕೊಡು ಎಂದು ಪ್ರಾರ್ಥಿಸುವೆನು ॥ ೯೬ ॥ ಪೂಜೆಯ ಫಲನ್ನು ಸಂಪೂರ್ಣವಾಗಿ ಕೊಡುವುದಾಗಿಯೂ, ಮುಖ್ಯ

**ವೃದ್ಧಿಕರಂ ಪರಮ್ । ಸುವರ್ಣಪುಷ್ಪಮೇತತ್ತೇ ಸಮರ್ಪಿತಮನಿಂದಿತಮ್ ॥ ೯೭ ॥ ದೇವಿ ಸರ್ವಜಗನ್ಮಾತರ್ಮಮ ಹೃತ್ಕಮಲೇಽಮಲೇ । ನಿವಸ ತ್ವಂ ಸಮಂ ಪತ್ಯಾ ಸರ್ವೈರಾವರಣೈರಪಿ ॥ ೯೮ ॥ ಗುಹ್ಯಾತಿಗುಹ್ಯಗೋಪ್ತ್ರಿ ತ್ವಂ ಗೃಹಾಣಾಸ್ಮತ್ ಕೃತಾರ್ಚನಮ್ । ಸಿದ್ಧಿರ್ಭವತು ಮೇ ದೇವಿ ತ್ವತ್ಪ್ರಸಾದಾನ್ಮಹೇಶ್ವರಿ ॥ ೯೯ ॥ ಇತ್ಥಂ ಪ್ರಪೂಜ್ಯ ಪುರುಷಃ ಪರದೇವತಾಂ ತಾಂ ದತ್ವಾ ಬಲಿಂ ಚ ಪರಿವಾರಕದೇವತಾಭ್ಯಃ । ಸಂಪ್ರೀಣಯೇದಪಿ ನುತಿದ್ವಿಜಭೋಜನಾದ್ಯೈರ್ಗೋಭೂಷಣಾರ್ಪಣಯುಜಾ ಗುರುಪೂಜನೇನ ॥ ೧೦೦ ॥ ಏವಂ ಪುರಾ ಹಿ ಕೋಲರ್ಷಿಃ ಕಾಶ್ಯಪೋ ಬ್ರಹ್ಮವಿತ್ತಮಃ । ಸುರಥೋ ನಾಮ ಭೂಪಾಲಃ ಸಮಾಧಿರ್ನಾಮ ವೈಶ್ಯರಾಟ್ ॥ ೧೦೧ ॥ ತಥಾ ಭೃಗುಸುತೋ ರಾಮಃ ಶುಕ್ರಾಚಾರ್ಯಶ್ಚ ಗೀಷ್ಪತಿಃ । ಪ್ರದ್ಯುಮ್ನೋ ನಾಮ**

---

ವಾಗಿಯೂ, ಇರುವ ಈ ಸುವರ್ಣಪುಷ್ಪವನ್ನು ನಿನಗೆ ಯಥಾಶಕ್ತಿಯಾಗಿ ಸಮರ್ಪಿಸುವೆನು ॥ ೯೭ ॥ ಹೇ ದೇವಿಯೆ! ಸಮಸ್ತ ಜಗತ್ತಿಗೂ ತಾಯಿಯಾದ ನೀನು ನನ್ನ ಸ್ವಚ್ಛವಾದ ಹೃತ್ಕಮಲದಲ್ಲಿ ಸಮಸ್ತ ಆವರಣದೇವತೆಗಳಿಂದಲೂ ನಿನ್ನ ಪತಿಯಿಂದಲೂ ಕೂಡಿ ವಾಸಮಾಡುವೆ'ಯೆಂದು ಪ್ರಾರ್ಥಿಸಬೇಕು ॥ ೯೮ ॥ 'ಅತ್ಯಂತ ಗುಟ್ಟಿಗೆ ಸಾಕ್ಷಿರೂಪಳಾದ ಎಲೈ ಮಹೇಶ್ವರಿಯೆ! ನೀನು ನನ್ನಿಂದ ರಚಿಸಲ್ಪಟ್ಟ ಪೂಜೆಯನ್ನು ಸ್ವೀಕರಿಸು. ನಿನ್ನ ಅನುಗ್ರಹದದೆಸೆಯಿಂದ ನನಗೆ ಸಿದ್ಧಿಯಾಗಲಿ.' ಪುರುಷದೇವತಾಪೂಜಾವಿಷಯದಲ್ಲಿ'ಗುಹ್ಯಾತಿಗುಹ್ಯಗೋಪ್ತಾ ತ್ವಂ ಗೃಹಾಣಾಸ್ಮತ್ಕೃತಾರ್ಚನಮ್ । ಸಿದ್ಧಿರ್ಭವತು ಮೇ ದೇವ ತ್ವತ್ಪ್ರಸಾದಾನ್ಮಹೇಶ್ವರ, ಜನಾರ್ದನ, ದಿವಾಕರ ॥' ಇತ್ಯಾದಿ ಯೋಚಿಸತಕ್ಕದ್ದು ॥ ೯೯ ॥ ಈ ರೀತಿಯಿಂದ ಪರದೇವತೆಯನ್ನು ಶ್ರೇಯೋಽರ್ಥಿಯಾದ ಪುರುಷನು ಪೂಜಿಸಿ, ಪರಿವಾರದೇವತೆಗಳಿಗೋಸ್ಕರ ಬಲಿಯನ್ನೂ ಕೊಟ್ಟು, ಸ್ತೋತ್ರ ನರ್ತನ ಬ್ರಾಹ್ಮಣಭೋಜನಾದಿಗಳಿಂದಲೂ, ಗೋದಾನ ಅಲಂಕಾರ ದಾನ ಸಹಿತವಾದ ಪುರೋಹಿತನ ಪೂಜೆಯಿಂದಲೂ, ದೇವಿಯನ್ನು ಸಂತೋಷಪಡಿಸತಕ್ಕದ್ದು ॥ ೧೦೦ ॥ ಈ ಪ್ರಕಾರವಾಗಿ ಹಿಂದೆ ಬ್ರಹ್ಮಜ್ಞಾನಿಗಳಲ್ಲಿ ಮುಖ್ಯನಾದ ಕೋಲರ್ಷಿ, ಕಾಶ್ಯಪನು, ಸುರಥನೆಂಬ ರಾಜನು, ಸಮಾಧಿಯೆಂಬ ವೈಶ್ಯನು ॥ ೧೦೧ ॥ ಹಾಗೆ ಭಾರ್ಗವರಾಮನೂ, ಶುಕ್ರಾಚಾರ್ಯನೂ, ಬೃಹಸ್ಪತ್ಯಾಚಾರ್ಯನೂ, ಪ್ರದ್ಯುಮ್ನನೆಂಬ ರಾಜರ್ಷಿಯೂ, ಲೋಕಾದಿತ್ಯ

**ರಾಜರ್ಷಿರ್ಲೋಕಾದಿತ್ಯೋ ದ್ವಿಜೋತ್ತಮಃ ॥ ೧೦೨ ॥ ವೈವಸ್ವತಾದಯಶ್ಚಾನ್ಯೇ ಬಹವೋಽಪಿ ಮಹರ್ಷಯಃ । ಸಮಾರಾಧ್ಯಾತ್ರ ದೇವೇಶೀಂ ಸಾಕ್ಷಾದ್ಬ್ರಹ್ಮಸ್ವರೂಪಿಣೀಮ್ ॥ ೧೦೩ ॥ ಪ್ರಾಪುರ್ನಿಜನಿಜಾಭೀಷ್ಟಾನ್ನಿತರಾಂ ಖಲು ದೇವರಾಟ್ । ಅತಸ್ತಾಂ ಶ್ರೀಮಹಾಲಕ್ಷ್ಮೀಂ ಕೋಲಾಪುರನಿವಾಸಿನೀಮ್ ॥ ೧೦೪ ॥ ಸಮಾರಾಧಯ ಯತ್ನೇನ ವತ್ಸ ತ್ವಂ ಮತ್ಸ್ವರೂಪಿಣೀಮ್ । ಯತಃ ಶ್ರೇಯಃ ಪರಂ ಪ್ರಾಪ್ತಃ ಸರ್ವತ್ರವಿಜಯೀ ಭವೇಃ ॥ ೧೦೫ ॥ ಸಕೃದಪಿ ವಿಧಿವದ್ಯಃ ಪೂಜಯೇದತ್ರ ದೇವೀಂ ಭವತಿ ವಿಗತಪಾಪಃ ಸರ್ವಭೋಗಾನ್ವಿತಶ್ಚ । ಕಿಮುತ ಸತತಮೇವಂ ಪೂಜಕಶ್ಚೇನ್ನಿರೀಹಃ ಸ ಯದಿ ಭಜತಿ ಸತ್ಯಂ ಸಚ್ಚಿದಾನಂದತತ್ತ್ವಮ್ ॥ ೧೦೬ ॥ ಈಶ್ವರ ಉವಾಚ ॥ ಇತಿ ಪೂರ್ವಂ**

---

ನೆಂಬ ಬ್ರಾಹ್ಮಣಶ್ರೇಷ್ಠನೂ ॥ ೧೦೨ ॥ ವೈವಸ್ವತಾದಿ ಮನುಗಳೂ, ಬೇರೆ ಅನೇಕ ಮಹರ್ಷಿಗಳೂ, ಈ ಮಹಾಕ್ಷೇತ್ರದಲ್ಲಿ ಸಾಕ್ಷಾತ್ಪರಬ್ರಹ್ಮಸ್ವರೂಪಿಣಿಯಾದ ದೇವೇಶಿಯನ್ನಾರಾಧಿಸಿ ॥ ೧೦೩ ॥ ವಿಶೇಷವಾಗಿ ತಮ್ಮ ತಮ್ಮ ಅಭೀಷ್ಟಗಳನ್ನು ಪಡೆದಿರುವರಷ್ಟೆ. (ವಿಸ್ತಾರವಾದ ಈ ಕೋಲಾಪುರ ಈ ಕ್ಷೇತ್ರ ಮಾಹಾತ್ಮ್ಯದಲ್ಲಿ ವ್ಯಾಲಾಸುರನ ವಧೆಯೂ ಲೋಕಾದಿತ್ಯ ಸುರಥ ಸಮಾಧಿ ಮೊದಲಾದವರ ಚರಿತ್ರೆಯೂ ಸ್ಪಷ್ಟವಾಗಿ ಹೇಳಿದ್ದಲ್ಲದೆ ॥ ೧೦೪ ॥ ವಿಷ್ಣುವು ತನಗೆ ಈ ಕೋಲಾಪುರವು ಮುಖ್ಯವಾದ ವಾಸಸ್ಥಾನವೆಂದು ಹೇಳಿರುವನು. ಶ್ಲೋಕ ॥ ತಸ್ಮಿನ್ ಜ್ಯೋತಿರ್ಮಯೇ ಲಿಂಗೇ ತನ್ಮಯೇ ಚ ಪರಾತ್ಪರೇ ॥ ತದೇಕತಾಂ ಪ್ರವಕ್ಷ್ಯೇಽಹಂ ತದ್ವಿಷ್ಣೋಃ ಪರಮಂ ಪದಮ್ ॥ ಎಂದು ಹನ್ನೊಂದನೆಯ ಅಧ್ಯಾಯದಲ್ಲಿ ವಿಷ್ಣುವಚನವು.) ಎಲೈ ಬಾಲನಾದ ಸ್ಕಂದನೆ! ಹಾಗಿರುವುದರಿಂದ ನೀನು ಪ್ರಯತ್ನದಿಂದ, ನನ್ನ ಸ್ವರೂಪಿಣಿಯಾದ ಕೋಲಾಪುರದಲ್ಲಿರುವ ಶ್ರೀಮಹಾಲಕ್ಷ್ಮಿಯನ್ನು ಚೆನ್ನಾಗಿ ಆರಾಧಿಸು. ಅದರಿಂದ ನೀನು ಮುಖ್ಯವಾದ ಶ್ರೇಯಸ್ಸನ್ನು ಪಡೆದವನಾಗಿ ಎಲ್ಲದರಲ್ಲಿಯೂ ಜಯವನ್ನು ಹೊಂದುವೆ, ॥ ೧೦೫ ॥ ಯಾವನು ಈ ಕೋಲಾಪುರದಲ್ಲಿ ದೇವಿಯನ್ನು ಒಂದಾವರ್ತಿಯಾದರೂ ವಿಧಿವತ್ತಾಗಿ ಪೂಜಿಸುವನೋ, ಅವನು ಸರ್ವಪಾಪಮುಕ್ತನೂ, ಸರ್ವಭೋಗಯುಕ್ತನೂ, ಆಗುವನು. ಹೀಗಿರುವಲ್ಲಿ ಪದೇ ಪದೇ ಪೂಜಿಸುವವನಾದರೆ, ಏನು ಹೇಳತಕ್ಕದ್ದಿದೆ? ಮತ್ತು ನಿಷ್ಕಾಮನಾಗಿ ಪೂಜಿಸುವವನಾದರೆ ಸತ್ಯವಾಗಿಯೂ ಕೈವಲ್ಯವನ್ನು ಹೊಂದುವನು

ಮಹೇಂದ್ರಾಯ ಯೋಷಿದ್ರೂಪಧರೋ ಹರಿಃ । ಉತ್ಸವಾದಿಕ್ರಮಂ
ಚೋಕ್ತ್ವಾ ತತ್ರೈವಾಂತರ್ದಧೇ ಪುನಃ ॥ ೧೦೭ ॥ ಸೋಽಪಿ ಶಕ್ರಃ
ಸಮಾಕರ್ಣ್ಯ ಹರೇರ್ವಾಕ್ಯಂ ಮಹಾಮನಾಃ । ಮಹೇಶೀಂ ತಾಂ
ಸಮಾರಾಧ್ಯ ಕೃತಕೃತ್ಯೋ ಬಭೂವ ಹ ॥ ೧೦೮ ॥ ಏವಂ ವಿಜ್ಞಾಯ
ಲೋಕೇಽಸ್ಮಿನ್ ಸರ್ವೈಃ ಶ್ರೇಯೋರ್ಥಿಭಿರ್ಜನೈಃ । ಸೈಷಾ ಹಿ
ಕಾಮಧುಗ್ದೇವೀ ಸರ್ವಥಾ ಸಮುಪಾಸ್ಯತಾಮ್ ॥ ೧೦೯ ॥ ಜ್ಯೋತಿ-
ರ್ಲಿಂಗಾರ್ಚನವಿಧಮೇಕಂ ಸಾಕ್ಷಾದ್ವಿಷ್ಣೂದಿತಮನಿಶಂ ಯಃ ।
ಭಕ್ತ್ಯಾ ಯುಕ್ತಃ ಪಠತಿ ಹಿ ಮರ್ತ್ಯಃ ಸರ್ವಾಮರ್ತ್ಯಾರ್ಚನಫಲ-
ಭಾಕ್ಸಃ ॥ ೧೧೦ ॥

ಇತಿ ಸ್ಕಾಂದೇ ಶ್ರೀಕೋಲಾಪುರಕ್ಷೇತ್ರಮಾಹಾತ್ಮ್ಯೇ ಜ್ಯೋತಿರ್ಲಿಂಗಾರ್ಚನಕ್ರಮೋ
ನಾಮ ದ್ವಿತೀಯೋಽಧ್ಯಾಯಃ ॥ ೨ ॥

---

॥ ೧೦೬ ॥ ಈಶ್ವರನು ಹೇಳಿದನು—ಎಲೈ ಸ್ಕಂದನೆ! ಹಿಂದೆ ಮೋಹಿನೀರೂಪ
ಧಾರಿಯಾದ ಹರಿಯು ಇಂದ್ರನಿಗೋಸ್ಕರ ಈ ಪ್ರಕಾರವಾಗಿ ದೇವಿಯ ಪೂಜಾ
ಕ್ರಮವನ್ನೂ, ಇದಲ್ಲದೆ ರಥೋತ್ಸವಾದಿ ಕ್ರಮವನ್ನೂ, ಹೇಳಿ ಅಲ್ಲಿಯೇ ಅಂತ
ರ್ಧಾನವನ್ನು ಪಡೆದನು ॥ ೧೦೭ ॥ ಬಳಿಕ ಇಂದ್ರನು ವಿಷ್ಣುವಿನ ಮಾತನ್ನು
ಕೇಳಿ ಅತಿ ಸಂತುಷ್ಟನಾಗಿ ಆ ಮಹೇಶಿಯನ್ನು ಆರಾಧಿಸಿ ಕೃತಕೃತ್ಯನಾದನು
॥ ೧೦೮ ॥ ಈ ಸಂಗತಿಯನ್ನು ತಿಳಿದು ಈ ಜಗತ್ತಿನಲ್ಲಿ ಶ್ರೇಯಸ್ಸನ್ನು ಅಪೇಕ್ಷಿ
ಸುವ ಸಮಸ್ತ ಜನರಿಂದಲೂ, ಈ ದೇವಿಯು ಕಾಮಧೇನುವಿನಂತಿರುವ
ಳಾದುದರಿಂದ ಸರ್ವಪ್ರಕಾರವಾಗಿಯೂ ಸೇವಿಸಲ್ಪಡಲಿ ॥ ೧೦೯ ॥ ಸಾಕ್ಷಾತ್
ವಿಷ್ಣುವಿನಿಂದ ಹೇಳಲ್ಪಟ್ಟ ಈ ಜ್ಯೋತಿರ್ಲಿಂಗಾರ್ಚನಾಧ್ಯಾಯವೊಂದನ್ನು
ನಿತ್ಯವೂ ಯಾವಾತನು ಭಕ್ತಿಯುಕ್ತನಾಗಿ ಪಠಿಸುವನೋ, ಅವನು ನಿಶ್ಚಯ
ವಾಗಿ ಸಮಸ್ತ ದೇವತಾರ್ಚನಫಲವನ್ನು ಪಡೆಯುವನು ॥ ೧೧೦ ॥

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತ ಶ್ರೀಕೋಲಾಪುರಕ್ಷೇತ್ರಮಾಹಾತ್ಮ್ಯದಲ್ಲಿ
ಎರಡನೆಯ ಅಧ್ಯಾಯವು ಮುಗಿದುದು

---

## ಅಥ ತೃತೀಯೋಽಧ್ಯಾಯಃ

**ಈಶ್ವರ ಉವಾಚ ॥ ಇತ್ಯೇತದಧುನಾ ಪ್ರೋಕ್ತಂ ತ್ವಯಾ ಪೃಷ್ಟಂ ಹಿ ಪುತ್ರಕ । ಶ್ರೀಮನ್ಮೂಕಾಂಬಿಕಾಕ್ಷೇತ್ರಮಾಹಾತ್ಮ್ಯಮತಿಪಾವನಮ್ ॥ ೧ ॥ ಅನೇನ ಸದೃಶಂ ಕ್ಷೇತ್ರಂ ಸರ್ವದೇವಾಶ್ರಯಂ ಪರಮ್। ಭುಕ್ತಿಮುಕ್ತಿಪ್ರದಂ ಭೂಮೌ ನಾಸ್ತಿ ನಾಸ್ತಿ ನ ಸಂಶಯಃ॥ ॥ ೨ ॥ ತೇಜೋಲಿಂಗಂ ಯತೋ ಜ್ಯೋತಿಶ್ಚಕ್ರಪೀಠಮಿದಂ ಸ್ಮೃತಮ್ । ಅವಿಮುಕ್ತಮಿತಿ ಪ್ರಾಹುಃ ಸದಾಶಿವನಿವಾಸತಃ ॥ ೩ ॥ ಕುಲಪೀಠಮಿತಿಸ್ಕಂದಶಾಕ್ತೈಃ ಕೈಶ್ಚಿದಿಹೋಚ್ಯತೇ। ಕಾಶ್ಯಾ ರಾಮೇಶ್ವರಕ್ಷೇತ್ರಾದ್ಗೋಕರ್ಣಕ್ಷೇತ್ರತೋಽಪ್ಯದಃ ॥ ೪ ॥ ಅತೀವ ಸಿದ್ಧಿದಂ ಲೋಕೇ ಮನ್ವತೇ ತತ್ತ್ವವಿಜ್ಞನಾಃ । ಮಮ ವಿಷ್ಣೋಸ್ತಥಾಽನ್ಯಾ-**

---

ಈಶ್ವರನು ಹೇಳಿದನು— ಎಲೈ ಪುತ್ರನೆ! ನಿನ್ನಿಂದ ಕೇಳಲ್ಪಟ್ಟ ಈ ಅತ್ಯಂತ ಪವಿತ್ರವಾದ ಮೂಕಾಂಬಿಕಾದೇವಿಯ ಕ್ಷೇತ್ರಮಾಹಾತ್ಮ್ಯವು ಈಗ ಈ ಪ್ರಕಾರವಾಗಿ ನನ್ನಿಂದ ಹೇಳಲ್ಪಟ್ಟಿತಲ್ಲವೆ? ॥ ೧ ॥ ಈ ಮಹಾಕ್ಷೇತ್ರಕ್ಕೆ ಸದೃಶವಾಗಿ ಭೋಗಮೋಕ್ಷಗಳೆರಡನ್ನೂ ಕೊಡತಕ್ಕದ್ದಾಗಿಯೂ, ಸಮಸ್ತ ದೇವತೆಗಳ ಸಾನ್ನಿಧ್ಯವುಳ್ಳದ್ದಾಗಿಯೂ ಇರುವ ಬೇರೆ ಕ್ಷೇತ್ರವು ಯಾವುದೂ ಭೂಮಿಯಲ್ಲಿಲ್ಲವೇ ಇಲ್ಲ. ಸಂಶಯವು ಇಲ್ಲ ॥ ೨ ॥ ಇದು ತೇಜೋಮಯ ಲಿಂಗವಾದುದರಿಂದ ಜ್ಯೋತಿಶ್ಚಕ್ರಪೀಠವೆಂತಲೂ, ಸರ್ವದಾ ಶಿವನ ಸಾನ್ನಿಧ್ಯ ವಿರುವುದರಿಂದ ಅವಿಮುಕ್ತಪೀಠವೆಂತಲೂ, ॥ ೩ ॥ ಕೆಲವು ಶಕ್ತ್ಯುಪಾಸಕರಿಂದ ಇದು ಕುಲಪೀಠವೆಂತಲೂ, ಹೇಳಲ್ಪಡುತ್ತದೆ. ಕಾಶೀ ರಾಮೇಶ್ವರ ಗೋಕರ್ಣಕ್ಷೇತ್ರಗಳಿಗಿಂತಲೂ ಇದೇ ಅತ್ಯಂತ ಸಿದ್ಧಿಯನ್ನು ಕೊಡತಕ್ಕದ್ದಾಗಿ ಲೋಕದಲ್ಲಿ ಪರಮಾರ್ಥವನ್ನು ತಿಳಿದಿರುವ ಜನರೇ ತಿಳಿಯುವರು. (ದೇವೀ ಭಾಗವತದಲ್ಲಿ ಶ್ಲೋಕ ॥ ಕೋಲಾಪುರಂ ಮಹಾಸ್ಥಾನಂ ಯತ್ರ ಲಕ್ಷ್ಮೀಃ ಸದಾ ಸ್ಥಿತಾ ॥ ಎಂದು ದೇವೀವಚನವು. ಕೆಲವರು ಈ ಕೋಲಾಪುರವು ಮಹಾರಾಷ್ಟ್ರದೇಶದಲ್ಲಿರುವ ಕೊಲ್ಹಾಪುರವೆಂಬ ಕರವೀರಕ್ಷೇತ್ರವೆಂದು ತಿಳಿಯುವರು ॥ ೪ ॥ ಅದು ಯುಕ್ತವಾದದ್ದಲ್ಲ. ಹೇಗೆಂದರೆ, "ಕರವೀರೇ ಮಹಾಲಕ್ಷ್ಮೀಃ" ಎಂದು ಅಲ್ಲಿಯೇ ಹಿಂದೆ ಅಷ್ಟೋತ್ತರಶತಪೀಠಗಳಲ್ಲಿ ಉಕ್ತವಾಗಿದೆ. ಮತ್ತು ವಾಯುಪುರಾಣ ಭೈರವಪುರಾಣ ವೇಂಕಟೇಶಮಹಾತ್ಮ್ಯ ಮೊದಲಾದುದರಲ್ಲಿ ಈ ಮಹಾಕ್ಷೇತ್ರವು ಪ್ರಶಂಸಿಸಲ್ಪಟ್ಟದ್ದಾಗಿದೆ. ಆದುದರಿಂದ ಇದು

ಸಾಂ ಶಕ್ತೀನಾಂ ಚಾತ್ರ ಸಂಸ್ಥಿತಿಃ ॥ ೫ ॥ ವರ್ತತೇಽಶೇಷತೋ ನಿತ್ಯಂ ಮೂಲಶಕ್ತ್ಯಾಶ್ರಯಂ ಯತಃ । ಅತಸ್ತ್ವಯಾಽಪಿ ಹೇ ವತ್ಸ ಸುಖೇನ ಸ್ಥೀಯತಾಮಿಹ ॥ ೬ ॥ ಸೂತ ಉವಾಚ ॥ ಇತಿ ಶಂಭೋರ್ವಚಃ ಶ್ರುತ್ವಾ ಸಂಜಾತಪ್ರತ್ಯಯಸ್ತದಾ । ಉವಾಸಾಸ್ಮಿನ್ಮಹಾಕ್ಷೇತ್ರೇ ಪರಮಾನಂದಭಾಗ್ಗುಹಃ ॥ ೭ ॥ ಏವಮುಕ್ತಮಿದಂ ಶಂಭುಗುಹಸಂವಾದರೂಪಿ ಯತ್ । ಮಾಹಾತ್ಮ್ಯಂ ಕಾಮದಂ ವಿಪ್ರಾಃ ಕಿಮನ್ಯತ್ಕಥಯಾಮಿ ವಃ ॥ ೮ ॥ ಋಷಯ ಊಚುಃ ॥ ಸೂತ ಸರ್ವಪುರಾಣಜ್ಞ ಪೀತ್ವಾ ತ್ವದ್ವಚನಾಮೃತಮ್। ತೃಪ್ತಿಂ ನೈವಾಧಿಗಚ್ಛಾಮೋ ಯೋಗಮಾಯಾವಿಲಾಸಿ ಯತ್ ॥೯॥ ಅಸ್ಮಿನ್ ಕ್ಷೇತ್ರೇ ಪ್ರಸನ್ನಾ ಸ್ಯಾತ್ಕೈಃ ಕೈಃ ಕರ್ಮಭಿರಂಬಿಕಾ । ಇತೀದಂ ವದ ತೀರ್ಥಾದಿವಿಶೇಷಂ ಚ ಕೃಪಾನ್ವಿತಃ ॥೧೦॥ ಸೂತ ಉವಾಚ॥ ಶೃಣ್ವಂತು ಸರ್ವೇ ಮುನಯೋ

---

ಮುಖ್ಯವಾಗಿರುವುದೆಂಬುವುದಕ್ಕೇನೂ ಅನುಮಾನವಿಲ್ಲ) ॥ ೫ ॥ ಎಲೈ ಬಾಲಕನೆ! ಈ ಪೀಠವು ಮೂಲದೇವಿಗೆ ಮುಖ್ಯವಾದ ಆಶ್ರಯಭೂತವಾಗಿರುವುದರಿಂದ ನನಗೂ, ವಿಷ್ಣುವಿಗೂ, ಬೇರೆ ಪಾರ್ವತೀ ಲಕ್ಷ್ಮ್ಯಾದಿ ಶಕ್ತಿಗಳಿಗೂ, ಈ ಪೀಠದಲ್ಲಿ ಸರ್ವದಾ ಸಂಪೂರ್ಣವಾದ ಸಾನ್ನಿಧ್ಯವಿರುತ್ತದೆ. ಆದುದರಿಂದ ಈ ಕ್ಷೇತ್ರದಲ್ಲಿ ನಿನ್ನಿಂದಲೂ ಸುಖದಿಂದ ವಾಸಮಾಡೋಣಾಗಲಿ ॥ ೬ ॥ ಸೂತನು ಹೇಳಿದನು— ಎಲೈ ಋಷಿಗಳಿರಾ! ಸ್ಕಂದನು ಈ ಪ್ರಕಾರವಾದ ಈಶ್ವರನ ವಚನವನ್ನು ಕೇಳಲು ಆಗ ಅತ್ಯಂತ ವಿಶ್ವಾಸವುಳ್ಳವನಾಗಿ ಮಹತ್ತಾದ ಆನಂದವನ್ನು ಹೊಂದಿ ಈ ಕೋಲಾಪುರದಲ್ಲಿ ವಾಸಮಾಡಿದನು ॥ ೭ ॥ ಇಷ್ಟಾರ್ಥವನ್ನು ಕೊಡತಕ್ಕ ಶಿವಷಣ್ಮುಖರ ಸಂವಾದರೂಪವಾದ ಈ ಕೋಲಾಪುರಮಾಹಾತ್ಮ್ಯವು ಈ ಪ್ರಕಾರವಾಗಿ ಹೇಳಲ್ಪಟ್ಟಿತು ॥ ೮ ॥ ನಿಮಗಿನ್ನೇನು ಹೇಳಲಿ? ಋಷಿಗಳು ಹೇಳಿದರು — ಸಮಸ್ತ ಪುರಾಣಗಳನ್ನು ತಿಳಿದಿರುವ ಎಲೈ ಸೂತಪುರಾಣಿಕನೆ! ವಿಚಿತ್ರರಚನೋದ್ಯುಕ್ತಳಾದ ಮಹಾಲಕ್ಷ್ಮಿಯ ಮಹಿಮೆಯುಳ್ಳದ್ದಾದ್ದರಿಂದ ನಿನ್ನ ವಚನವೆಂಬ ಅಮೃತವನ್ನು ಕುಡಿದು ನಾವು ತೃಪ್ತಿಯನ್ನು ಹೊಂದಲಾರೆವು ॥ ೯ ॥ ಆದುದರಿಂದ ಈ ಮಹಾಕ್ಷೇತ್ರದಲ್ಲಿ ಪರದೇವತೆಯು ಯಾವಾವ ಸತ್ಕರ್ಮಗಳನ್ನು ಮಾಡುವುದರಿಂದ ಸಂತುಷ್ಟಳಾದಾಳು ಎಂಬುದನ್ನೂ, ತೀರ್ಥ ಮೊದಲಾದವುಗಳ ವಿಶೇಷವನ್ನೂ ಕೃಪೆಯಿಂದೆಮಗೆ ಹೇಳು ॥ ೧೦ ॥ ಸೂತನು ಹೇಳಿದನು— ಮಹಾತ್ಮರಾದ ಮುನಿಗಳೆಲ್ಲರೂ

ಮಹಾಂತಃ ಸಾಂಬವ್ರತಂ ಸರ್ವಫಲಪ್ರದಂ ಯತ್ । ತದತ್ರ ಮುಖ್ಯಂ ಕಥಿತಂ ಶಿವೇನ ಕೃಷ್ಣಾದಿಭಿಶ್ಚಾಽಽಚರಿತಂ ಹಿ ಪೂರ್ವಮ್ ॥ ॥ ೧೧ ॥ ಶಾಕ್ತಂ ಚ ಶೈವಂ ಖಲು ವೈಷ್ಣವಂ ವಾ ಯಚ್ಚಾನ್ಯದಸ್ತಿ ವ್ರತವರ್ಯಮುಕ್ತಮ್ । ಮರ್ತ್ಯೈಃ ಕೃತಂ ಚೇದಖಿಲಾತ್ಮಿಕಾಽಸೌ ಫಲಂ ತತಃ ಕೋಟಿಗುಣಂ ದದಾತಿ ॥ ೧೨ ॥ ಪಾರಾಯಣಂ ಚಾತ್ರ ಹಿ ಸಪ್ತಶತ್ಯಾಃ ಸದ್ಭೋಜನಾದ್ಯೈಃ ಸ ವೇದಪಾಠಃ । ಅನ್ಯೋಽಪಿ ಭಕ್ತ್ಯಾ ಮನುಜೈಃ ಕೃತಶ್ಚೇತ್ಫಲಂ ತತಃ ಕೋಟಿಗುಣಂ ದದಾತಿ ॥ ೧೩॥ ನವಾರ್ಣಮುಖ್ಯಾ ಅಪಿ ಮಂತ್ರರಾಜಾಃ ಶಾಕ್ತಾಃ ಪರೇ ವಿಷ್ಣು-ಪರಾಶ್ಚ ಶೈವಾಃ । ಸುಸಾಧಕೈಸ್ತೈರುಪಜಾಪಿತಾಶ್ಚೇತ್ಫಲಂ ತತಃ ಕೋಟಿಗುಣಂ ದದಾತಿ ॥ ೧೪ ॥ ಕುಮಾರಿಕಾಣಾಂ ಚ ಸುವಾಸಿನೀ-

---

ಕೇಳುವವರಾಗಲಿ. ಸಕಲ ಇಷ್ಟಾರ್ಥಗಳನ್ನು ಕೊಡತಕ್ಕ ಸಾಂಬವ್ರತವೆಂಬದು ಯಾವುದುಂಟೋ, ಅದು ಇಲ್ಲಿ ಮುಖ್ಯವಾಗಿರುವುದೆಂದು ಶಿವನಿಂದ ಹೇಳಲ್ಪಟ್ಟಿದ್ದಲ್ಲದೆ, ಶ್ರೀಕೃಷ್ಣ ಮೊದಲಾದವರಿಂದ ಆಚರಿಸಲ್ಪಟ್ಟು ಇದೆಯಷ್ಟೆ? (ಈ ಸಾಂಬವ್ರತವನ್ನು ಶ್ರೀಕೃಷ್ಣನು ಆಚರಿಸಿರುವುದು ವಿಸ್ತಾರವಾದ ಈ ಮಾಹಾತ್ಮ್ಯದಲ್ಲಿ ನಾಲ್ಕು ಅಧ್ಯಾಯಗಳಾಗಿದೆ) ॥ ೧೧ ॥ ಇದಲ್ಲದೆ ಬೇರೆ ಶಕ್ತಿಪರಗಳಾಗಿಯೂ, ಶಿವಪರಗಳಾಗಿಯೂ, ವಿಷ್ಣುಪರಗಳಾಗಿಯೂ, ಇರುವ ಶ್ರೇಷ್ಠಗಳಾದ ವ್ರತ ಉದ್ಯಾಪನೆ ಮೊದಲಾದ್ದು ಯಾವುದು ಹೇಳಲ್ಪಟ್ಟಿರುವುದೋ, ಅದು ಇಲ್ಲಿ ಮನುಷ್ಯರಿಂದ ಆಚರಿಸಲ್ಪಟ್ಟರೆ ಸಮಸ್ತ ದೇವತಾರೂಪಿಣಿಯಾಗಿರುವ ಕಾರಣದಿಂದ ಈ ದೇವಿಯು ತಾನೇ ಅದರ ಫಲವನ್ನು ಕೋಟಿಗುಣವಾಗಿ ಕೊಡುವಳು ॥ ೧೨ ॥ ಬ್ರಾಹ್ಮಣಭೋಜನಾದಿ ಸತ್ಕರ್ಮಗಳಿಂದ ಸಹಿತವಾಗಿ ಸಪ್ತಶತೀ ಪಾರಾಯಣವೂ, ವೇದಪಾರಾಯಣವೂ, ಬೇರೆ ದೇವೀಭಾಗವತ ನವಾಹಪಾಠ ಮೊದಲಾಗಿರುವುದೂ, ಭಕ್ತಿಯಿಂದ ಇಲ್ಲಿ ಮನುಷ್ಯರಿಂದ ಮಾಡಲ್ಪಟ್ಟರೆ ದೇವಿಯು ಅದರ ಫಲವನ್ನೂ ಕೋಟಿಗುಣವಾಗಿ ಕೊಡುವಳು ॥ ೧೩ ॥ ನವಾಕ್ಷರೀ ಮೊದಲಾದ ಶಕ್ತಿಪರಗಳಾಗಿಯೂ, ಬೇರೆ ವಿಷ್ಣುಪರಗಳಾಗಿಯೂ, ಶಿವಪರಗಳಾಗಿಯೂ, ಇರುವ ಸನ್ಮಂತ್ರಗಳೂ ಇಲ್ಲಿ ಸಜ್ಜನರಾದ ಸಾಧಕರಿಂದ ಜಪಿಸಲ್ಪಟ್ಟರೆ ದೇವಿಯು ಅದರ ಫಲವನ್ನೂ ಕೋಟಿಗುಣವಾಗಿ ಕೊಡುವಳು ॥ ೧೪ ॥ ಕುಮಾರೀ, ಸುವಾಸಿನೀ, ಬ್ರಾಹ್ಮಣರಿಗೂ ಇತರರಾದ ಶೂದ್ರಾದಿ ಜನರಿಗೂ, ಅನ್ನದಾನ

**ನಾಂ ದ್ವಿಜೋತ್ತಮಾನಾಂ ಚ ತಥೇತರೇಷಾಮ್ । ಸಂತರ್ಪಣಂ ಚಾನ್ನವಿಭೂಷಣಾದ್ಯೈಃ ಫಲಂ ತತಃ ಕೋಟಿಗುಣಂ ದದಾತಿ ॥೧೫॥ ಗೋಭೂಮಿಹೇಮಾಂಶುಕಮುಖ್ಯದಾನಾನ್ಯುಕ್ತಾನಿ ವೈ ಪುಣ್ಯ-ಕರಾಣಿ ಯಾನಿ । ಕರ್ಮಾಣಿ ಯದ್ಯಾಚರಿತಾನಿ ತಾನಿ ಫಲಂ ತತಃ ಕೋಟಿಗುಣಂ ದದಾತಿ ॥ ೧೬ ॥ ದದಾತಿ ಪಿಂಡಂ ಸ್ವಪಿತೃಭ್ಯ ಏಷ ತಿಲೋದಕಂ ಮುಂಡನಕರ್ಮ ವರ್ಜ್ಯಮ್ । ಸೌಪರ್ಣಿಕಾಯಾಂ ಯದಿ ಶುಕ್ಲತೀರ್ಥೇ ಯದ್ವಾಥತೇಸ್ವಃ ಪಿತರೋ ಹಿ ಯಾಂತಿ ॥ ೧೭ ॥ ಕ್ಷೇತ್ರೇಽತ್ರ ಸಂಸ್ಥಾಃ ಸಕಲಾ ಹಿ ಸಾಕ್ಷಾದ್ದೇವೀಸ್ವರೂಪಾ ಇತಿ ಭಾವನೀಯಾಃ । ಅತೋಽನ್ನಮುಖ್ಯೈಃ ಪರಿತೋಷಯೇತ್ತಾನ್ಪ್ರತಿ-ಗ್ರಹಂ ನೋ ಸ್ವಯಮತ್ರ ಕುರ್ಯಾತ್ ॥ ೧೮ ॥ ರಥೋತ್ಸವಂ ಜಾಗರಣೋತ್ಸವಂ ವಾ ಡೋಲೋತ್ಸವಂ ವಾ ಶಯನೋತ್ಸವಂ ವಾ । ಯಃ ಕಾರಯೇತ್ತ್ವೋಽತ್ರ ಹಿ ಭಾಗ್ಯವಾನ್ಸನ್ ಪ್ರಾಪ್ನೋತಿ ಸಾಯುಜ್ಯಮಥಾಖಿಲೇಶ್ಯಾಃ ॥ ೧೯ ॥ ಯೋ ನೇಹ ಲಿಂಗೇ ಮಧು-**

---

ಅಲಂಕಾರಾದಿಗಳಿಂದ ಸಂತರ್ಪಣೆಯು ಮಾಡಲ್ಪಟ್ಟರೆ ಈ ದೇವಿಯು ಅದರ ಫಲವನ್ನೂ ಕೋಟಿಗುಣವಾಗಿ ಕೊಡುವಳು ॥ ೧೫ ॥ ಗೋದಾನ, ಭೂದಾನ, ಸುವರ್ಣದಾನ, ವಸ್ತ್ರದಾನ, ಮೊದಲಾದ ದಾನಗಳೂ, ಮತ್ತು ಬೇರೆ ಪುಣ್ಯ ಕರಗಳಾದ ಕರ್ಮಗಳೂ, ಯಾವುವು ಮುನಿಗಳಿಂದ ಹೇಳಲ್ಪಟ್ಟಿವೆಯೋ, ಅವುಗಳೂ ಇಲ್ಲಿ ಆಚರಿಸಲ್ಪಟ್ಟರೆ ದೇವಿಯು ಅವುಗಳ ಫಲಗಳನ್ನೂ, ಕೋಟಿ ಗುಣವಾಗಿ ಕೊಡುವಳು ॥ ೧೬ ॥ ಈ ದೇವೀದರ್ಶನಾರ್ಥವಾಗಿ ಬಂದವನು ಸೌಪರ್ಣಿಕಾನದೀತೀರದಲ್ಲಿ ಅಥವಾ ಶುಕ್ಲತೀರ್ಥದಲ್ಲಿ ಕ್ಷೌರಹೊರತಾಗಿ ತನ್ನ ಪಿತೃಗಳಿಗೋಸ್ಕರ ತಿಲೋದಕಪಿಂಡದಾನಪೂರ್ವಕ ಶ್ರಾದ್ಧವನ್ನು ಮಾಡಿದರೆ ಆ ಪಿತೃಗಳು ಬಳಿಕ ನಿಶ್ಚಯವಾಗಿಯೂ ಸ್ವರ್ಗವನ್ನೈದುವರು ॥ ೧೭ ॥ ಈ ಕ್ಷೇತ್ರದಲ್ಲಿರುವ ಚಂಡಾಲಾಂತ ಸಮಸ್ತರೂ ಸಾಕ್ಷಾತ್ ದೇವೀ ಸ್ವರೂಪರೆಂದು ಭಾವಿಸಲ್ಪಡತಕ್ಕವರಾದುದರಿಂದ ಅವರನ್ನು ಅನ್ನದಾನಾದಿ ಗಳಿಂದ ಸಂತೋಷಪಡಿಸತಕ್ಕದ್ದು. ತಾನು ಮಾತ್ರ ಇಲ್ಲಿ ಪ್ರತಿಗ್ರಹವನ್ನು ಮಾಡಕೂಡದು ॥ ೧೮ ॥ ದೇವಿಗೆ ಯಾವಾತನು ರಥೋತ್ಸವವನ್ನಾಗಲೀ, ಜಾಗರಣೋತ್ಸವವನ್ನಾಗಲಿ, ಡೋಲೋತ್ಸವವನ್ನಾಗಲಿ, ಶಯನೋತ್ಸವ ವನ್ನಾಗಲಿ, ಮಾಡಿಸುವನೋ, ಅವನು ಇಹದಲ್ಲಿ ಭಾಗ್ಯವಂತನಾಗಿದೇಹಾಂತ್ಯ

**ಸೂದನೋಽರ್ಚಿತೋ ವೈಕುಂಠಲೋಕಂ ಶಶಿಶೇಖರೋಽರ್ಚಿತಃ । ಕೈಲಾಸಲೋಕಂ ನಿಖಿಲಾತ್ಮಿಕಾರ್ಚಿತಾ ಪರಂ ಮಣಿದ್ವೀಪಮುಪೈತ್ಯಯಂ ನರಃ ॥ ೨೦ ॥ ತಥಾಽತ್ರ ಕಾಲೀ ಪರಿಪೂಜಿತಾ ಜಯಾನ್ ಲಕ್ಷ್ಮೀಶ್ಚ ಲಕ್ಷ್ಮೀಃ ಪರಿಪೂಜಿತಾ ಯದಿ । ವಿದ್ಯಾಃ ಸರಸ್ವತ್ಯಪಿ ಪೂಜಿತಾ ಪುನರ್ದದಾತಿ ಸರ್ವಾಂಶ್ಚ ಪರಾಂಬಿಕಾರ್ಚಿತಾ ॥ ೨೧ ॥ ಕಾಲೋಽಖಿಲೋಽಪ್ಯತ್ರ ಮತಃ ಪ್ರಶಸ್ತಸ್ತತ್ರಾಪಿ ಮುಖ್ಯಂ ನವರಾತ್ರಯುಗ್ಮಮ್ । ಚತುರ್ದಶೀಪಂಚದಶೀನವಮ್ಯಸ್ತಥಾಽಷ್ಟಮೀ ಮಂಗಲಶುಕ್ರವಾರೌ ॥ ೨೨ ॥ ಯೇ ಸಂತಿ ಲೋಕೇ ಗಜವಾಹನಾಶ್ಚ ಯೇ ಶಕ್ತಿಮಂತೋ ಹಯವಾಹನಾ ಯೇ । ಯೇ ಭೋಗವಂತೋ ನರವಾಹನಾ ಯೇ ದೇವ್ಯರ್ಚನಂ ತೈಃ ಕೃತಮೇವ ಪೂರ್ವಮ್ ॥ ॥ ೨೩ ॥ ಯೇ ಶಕ್ತಿಹೀನಾ ಧನವರ್ಜಿತಾ ಯೇ ಯೇ ರೋಗಿಣಃ**

---

ದಲ್ಲಿ ದೇವೀಸಾಯುಜ್ಯವನ್ನು ಐದುವನು ॥ ೧೯ ॥ ಈ ಜ್ಯೋತಿರ್ಮಯ ಲಿಂಗದಲ್ಲಿ ಯಾವನಿಂದ ವಿಷ್ಣುವು ಪೂಜಿಸಲ್ಪಡುವನೋ, ಅವನು ವೈಕುಂಠ ವನ್ನೂ, ಯಾವನಿಂದ ಶಿವನು ಪೂಜಿಸಲ್ಪಡುವನೋ, ಅವನು ಕೈಲಾಸವನ್ನೂ ಯಾವನಿಂದ ಮಹಾಲಕ್ಷ್ಮಿಯು ಪೂಜಿಸಲ್ಪಡುವಳೋ, ಅವನು ಸರ್ವೋತ್ಕೃಷ್ಟವಾದ ಮಣಿದ್ವೀಪವನ್ನೂ ಪಡೆಯುವನು ॥ ೨೦ ॥ ಹಾಗೆ ಈ ಲಿಂಗ ದಲ್ಲಿ ಕಾಳಿಯು ಪೂಜಿಸಲ್ಪಟ್ಟರೆ ಜಯಗಳನ್ನೂ, ಲಕ್ಷ್ಮಿಯು ಪೂಜಿಸಲ್ಪಟ್ಟರೆ ಐಶ್ವರ್ಯಗಳನ್ನೂ, ಸರಸ್ವತಿಯು ಪೂಜಿಸಲ್ಪಟ್ಟರೆ ವಿದ್ಯೆಗಳನ್ನೂ, ಮಹಾ ಲಕ್ಷ್ಮಿಯು ಪೂಜಿಸಲ್ಪಟ್ಟರೆ ಸಕಲ ಅಭೀಷ್ಟಗಳನ್ನೂ ಪಡೆಯುವನು ॥ ೨೧ ॥ ಇಲ್ಲಿ ದೇವಿಯನ್ನಾರಾಧಿಸಲಿಕ್ಕೆ ಸಮಸ್ತಕಾಲವೂ ಶುಭವೇ ಆಗಿದೆ. ಅದ ರಲ್ಲಿಯೂ ಶರತ್ಕಾಲ ನವರಾತ್ರ ವಸಂತಕಾಲ ನವರಾತ್ರಗಳೆಂಬೆರಡೂ, ಚತುರ್ದಶೀ ಪೂರ್ಣಿಮಾ ಅಮಾವಾಸ್ಯೆ ನವಮೀ ಅಷ್ಟಮೀ ತಿಥಿಗಳೂ ಮಂಗಳವಾರ ಶುಕ್ರವಾರಗಳೂ ಮುಖ್ಯಗಳಾಗಿರುವುವು ॥ ೨೨ ॥ ಲೋಕದಲ್ಲಿ ಯಾರ್ಯಾರು ಗಜವಾಹನರಾಗಿಯೂ, ಬಲಿಷ್ಠರಾಗಿಯೂ, ಅಶ್ವವನ್ನೇರಿ ತಿರುಗುವವರಾಗಿಯೂ, ಭೋಗಶಾಲಿಗಳಾಗಿಯೂ, ಮೇನೆ ಮೊದಲಾದ್ದನ್ನೇರಿ ತಿರುಗುವವರಾಗಿಯೂ ಇರುವರೋ, ಅವರಿಂದ ಪೂರ್ವಜನ್ಮದಲ್ಲಿ ದೇವಿಯಾರಾಧನೆಯು ನಿಶ್ಚಯವಾಗಿ ಮಾಡಲ್ಪಟ್ಟಿದೆಯೆಂದು ಊಹಿಸ ತಕ್ಕದ್ದು ॥ ೨೩ ॥ ಮತ್ತು ಯಾರು ಶಕ್ತಿಹೀನರಾಗಿಯೂ, ದರಿದ್ರರಾಗಿಯೂ,

ಪುತ್ರವಿವರ್ಜಿತಾ ಯೇ । ಸತೀವಿಹೀನಾ ಅಪಿ ದುಃಖಭಾಜೋ ದೇವ್ಯರ್ಚನಂ ತೈರ್ನ ಕೃತಂ ಹಿ ಪೂರ್ವಮ್ ॥ ೨೪ ॥ ಅತಃ ಪ್ರಯತ್ನೇನ ಚ ಬುದ್ಧಿಮಾನ್ಯಃ ಸ ಮಾನವಸ್ತದ್ಗತಮಾನಸಃ ಸನ್ । ಪ್ರಪೂಜಯೇದತ್ರ ಹಿ ವಿತ್ತಶಾಠ್ಯವಿವರ್ಜಿತಃ ಕಾಮದುಘಾಂ ಮಹೇಶೀಮ್ ॥ ೨೫ ॥ ಬ್ರಹ್ಮಾ ಹರಿಃ ಶಂಭುರಮೀ ತ್ರಯೋಽಪಿ ಧ್ಯಾಯಂತಿ ನಿತ್ಯಂ ಸ್ವವಿಭೂತಿವೃದ್ಧ್ಯೈ । ಯಾಂ ಸರ್ವಶಕ್ತಿಂ ನ ಚ ಪೂಜಯೇತ್ತಾಂ ಯಸ್ತಸ್ಯ ಜನ್ಮೇಹ ನಿರರ್ಥಕಂ ಹಿ ॥ ೨೬ ॥ ಯೋ ದೇವದೇವ್ಯೈ ತದುಪಾಸಕಾಯ ವಾ ದದಾತಿ ಭೂಮಿಂ ಕನಕಾದಿಕಂ ಚ ವಾ । ಸ ಯಾತಿ ಲೋಕಂ ಪ್ರಕೃತೇಃ ಸಮಂ ಫಲಂ ದೇವಾಯ ವಿಪ್ರಾಯ ಚ ದಾನತಃ ಸ್ಮೃತಮ್ ॥ ೨೭ ॥ ಯಾಸೌ ಮಹಾಪಾಪಿ-

---

ರೋಗಿಷ್ಠರಾಗಿಯೂ, ಪುತ್ರಹೀನರಾಗಿಯೂ, ಪತ್ನಿಹೀನರಾಗಿಯೂ, ದುಃಖವನ್ನು ಹೊಂದಿದವರಾಗಿಯೂ ಇರುವರೋ, ಅವರಿಂದ ಪೂರ್ವಜನ್ಮದಲ್ಲಿ ದೇವಿಯಾರಾಧನೆಯು ನಿಶ್ಚಯವಾಗಿಯೂ ಮಾಡಲ್ಪಡಲಿಲ್ಲವೆಂದು ಊಹಿಸತಕ್ಕದ್ದು ॥ ೨೪ ॥ ಆದುದರಿಂದ ಬುದ್ಧಿಶಾಲಿಯಾದ ಮನುಷ್ಯನು ಎಷ್ಟು ಪ್ರಯಾಸವಾದರೂ ದೇವಿಯಲ್ಲಿಯೇ ಮನಸ್ಸಿಟ್ಟವನಾಗಿ, ದ್ರವ್ಯಲೋಭವನ್ನು ಬಿಟ್ಟು, ಈ ಕೋಲಾಪುರದಲ್ಲಿ ಇಷ್ಟಾರ್ಥಗಳನ್ನು ಸುರಿಸತಕ್ಕ ಶ್ರೀಮಹಾಲಕ್ಷ್ಮಿಯನ್ನು ಪೂಜಿಸತಕ್ಕದ್ದು ॥ ೨೫ ॥ ಬ್ರಹ್ಮ ವಿಷ್ಣು ರುದ್ರರೀ ಮೂವರೂ ಸಹ ತಮ್ಮ ಐಶ್ವರ್ಯಗಳ ಅಭಿವೃದ್ಧಿಗೋಸ್ಕರ ನಿತ್ಯವೂ ಸರ್ವಶಕ್ತಿಸ್ವರೂಪಿಣಿಯಾದ ದೇವಿಯನ್ನು ಧ್ಯಾನಿಸುವರು. ಹೀಗಿರುವಲ್ಲಿ ಅಂತಹ ಪರದೇವತೆಯನ್ನು ಯಾವನು ಪೂಜಿಸುವುದಿಲ್ಲವೋ ಅವನು ಈ ಪುಣ್ಯಭೂಮಿಯಲ್ಲಿ ಜನಿಸಿರುವುದು ವ್ಯರ್ಥವೇ ಸರಿ ॥ ೨೬ ॥ ಯಾವನು ದೇವಿಗಾಗಲೀ ಅಥವಾ ದೇವಿಯುಪಾಸಕನಿಗಾಗಲೀ ಭೂಮಿಯನ್ನೂ, ಸುವರ್ಣ ಮೊದಲಾದ್ದನ್ನೂ ಕೊಡುವನೋ ಅವನು ದೇವಿಯ ಲೋಕವೆಂಬ ಮಣಿದ್ವೀಪವನ್ನೈಯ್ದುವನು. ಹೇಗೆಂದರೆ: ದೇವರಿಗೂ, ಬ್ರಾಹ್ಮಣನಿಗೂ ದಾನವನ್ನು ಮಾಡುವುದರಿಂದ ಸಮಫಲವೆಂದು ಋಷಿಗಳಿಂದ ಹೇಳಲ್ಪಟ್ಟಿದೆ. (ದೇವೀಭಾಗವತದಲ್ಲಿಯೂ ಶ್ಲೋಕ: ಬ್ರಾಹ್ಮಣೇಭ್ಯೋಽಥ ದೇವೇಭ್ಯೋ ದಾನೇ ಸಮಫಲಂ ಲಭೇತ್ ॥ ಎಂದು ಇರುತ್ತದೆ) ॥ ೨೭ ॥ ಈ ಕಲಿಯುಗದಲ್ಲಿ ಭಾಗೀರಥಿಯು, ಕ್ಷಣಮಾತ್ರದಿಂದ ಸಾವಿರಾರು ಮಹಾಪಾಪಿಗಳನ್ನು ಶುದ್ಧೀಕರಿಸುವಳಷ್ಟೆ, ಅಂತಹ

**ಸಹಸ್ರಕಂ ಕ್ಷಣಾತ್ಪುನಾತಿ ಗಂಗಾ ಮಹತೀ ಕಲೌ ಕಿಲ । ಸಾಽಪಿ ಪ್ರಕೃತ್ಯಾಃ ಸದುಪಾಸಕಾಪ್ಲವಂ ಕಾಂಕ್ಷತ್ಯಜಸ್ರಂ ಧೃತಪಾಪನಾಶತಃ॥ ॥ ೨೮ ॥ ತಸ್ಮಾದ್ಧಿ ತ್ರಿಜಗತಿ ಶಕ್ತಿಭಕ್ತತುಲ್ಯಃ ಸಂಶುದ್ಧಃ ಪ್ರಭವತಿ-ಕಶ್ಚ ನಾಪಿ ನಾನ್ಯಃ । ತದ್ದತ್ತಂ ಬಹುಮನುತೇಽಪಿ ಸಾ ಸ್ವದತ್ತಾ-ತ್ತುಷ್ಟೇಽಸ್ಮಿನ್ಭವತಿ ಪರಾಂಬಿಕಾಽತಿತುಷ್ಟಾ ॥ ೨೯ ॥ ಶ್ರೀಮಾನ್ ಕ್ಷ್ಮಾಭೃದ್ವರೇಣ್ಯಃ ಕುಟಜಗಿರಿರಿತಿ ಖ್ಯಾತಸಂಜೀವಕಾದ್ರಿಃ ಪೂರ್ವಂ ಯುದ್ಧೇ ತು ಸೀತಾಪತಿದಶಮುಖಯೋರಂಜನಾಯಾಃ ಸುತೇನ । ಪ್ರಕ್ಷಿಪ್ತಃ ಶ್ರೀಮಹೇಶ್ಯಾಃ ಪುರತ ಇಹ ಚತುಃಷಷ್ಟಿತೀರ್ಥೌಷಧಾಢ್ಯಃ ಸಾಕ್ಷಾದೀಶಸ್ವರೂಪೀ ಜಯತಿ ಹಿ ನಿತರಾಂ ಪ್ರಾಣಿನಾಂ ಹಂತ ಭಾಗ್ಯಮ್ ॥ ೩೦ ॥ ಇಹ ಪ್ರಾದುರ್ಭೂತಾ ಕುಟಜಗಿರಿವರ್ಯಾದ್ವ-**

---

ಮಹಾನುಭಾವಳಾದರೂ ತಾನು ಧರಿಸಿರುವ ಆ ಪಾಪಿ ನರಪಾಪಸಮೂಹವನ್ನು ನಾಶಮಾಡಿಕೊಳ್ಳಲೋಸ್ಕರ ನಿರಂತರವೂ ದೇವಿಯ ಶ್ರೇಷ್ಠರಾದ ಉಪಾಸಕರ ಸ್ನಾನವನ್ನು ಹಾರೈಸುತ್ತಿರುವಳು ॥ ೨೮ ॥ ಹಾಗಿರುವ ದೆಸೆಯಿಂದ ಮೂರು ಲೋಕದಲ್ಲಿಯೂ, ಬೇರೆ ಯಾವನೂ ಶಕ್ತಿಭಕ್ತನಿಗೆ ಸಮನಾಗಿ ಪರಿಶುದ್ಧನಾಗಲಾರನು. ಆ ಕಾರಣದಿಂದ ದೇವ್ಯುಪಾಸಕನಿಗೆ ಕೊಟ್ಟಿರುವುದನ್ನೇ ಅಂಬಿಕೆಯು ತನಗೆ ಕೊಟ್ಟಿರುವುದಕ್ಕಿಂತಲೂ ವಿಶೇಷವಾಗಿ ತಿಳಿಯುವಳು. ಹೀಗೆಂಬಲ್ಲಿ ಆ ಉಪಾಸಕನು ಕೋಪಯುಕ್ತನಾದರೆ ದೇವಿಯೂ ಅತಿಕೋಪಯುಕ್ತಳಾಗುವಳೆಂಬುದು ಸಹಜವಷ್ಟೆ? ॥ ೨೯ ॥ ಈ ಮಹಾಕ್ಷೇತ್ರದಲ್ಲಿ ಪರ್ವತಗಳಿಗೆ ಶ್ರೇಷ್ಠವಾದ ಕುಟಜಗಿರಿಯೆಂಬ ಸಂಜೀವಕಾದ್ರಿಯು ಸರ್ವೋತ್ಕೃಷ್ಟವಾಗಿರುತ್ತದೆ. ಇದು ಹಿಂದೆ ರಾಮರಾವಣರ ಯುದ್ಧಕಾಲದಲ್ಲಿ ಹನುಮಂತನಿಂದ ಈ ಮಹಾಲಕ್ಷ್ಮಿಯ ಮುಂದೆ ಇಡಲ್ಪಟ್ಟಿರುವುದಾಗಿಯೂ ಅರುವತ್ತನಾಲ್ಕು ದಿವ್ಯತೀರ್ಥಗಳಿಂದಲೂ, ದಿವ್ಯೌಷಧಗಳಿಂದಲೂ, ಯುಕ್ತವಾಗಿರುವುದಾಗಿಯೂ, ಸಾಕ್ಷಾತ್ ಶಿವಸ್ವರೂಪಿಯಾಗಿಯೂ ಇರುತ್ತದೆ. ಹೀಗಿರುವುದು ಜನರ ಅತ್ಯಂತವಾದ ಭಾಗ್ಯವೇಸರಿ. ಹೀಗೆಂದು ನಮಗೆ ಸರ್ವಥಾ ಮನಸ್ತಾಪವಿಲ್ಲ. (ಕುಟಜವೆಂದರೆ ಸಂಜೀವನವಿರತಕ್ಕ ವೃಕ್ಷ. ಆ ವೃಕ್ಷವು ಈ ಪರ್ವತದಲ್ಲಿರುವುದರಿಂದ ಕುಟಜಾದ್ರಿಯೆಂದೂ ಭೈರವಪುರಾಣದಲ್ಲಿ ಹೇಳಲ್ಪಟ್ಟಿದೆ) ॥ ೩೦ ॥ ಮತ್ತು ಈ ಕ್ಷೇತ್ರದಲ್ಲಿ ಕುಟಜಾದ್ರಿಯ ದೆಸೆಯಿಂದ ಕಾಣಿಸಿಕೊಂಡದ್ದಾಗಿಯೂ,

**ರನದೀ ತದುದ್ಯತ್ತೀರ್ಥಾಢ್ಯಾ ಕಲಿಕಲುಷನಾಶೈಕಚತುರಾ । ಅಸೌ ಸೌಪರ್ಣೀ ಸ್ಯಾನ್ನಿಖಿಲಫಲಸಿದ್ಧ್ಯೈ ತನುಭೃತಾಂ ಸುಪರ್ಣೋ ಯತ್ರಾಪ ಸ್ವವರಮಮರೇಶ್ಯಾ ಹಿ ತಪಸಾ ॥ ೩೧ ॥ ಪಾನಾಧಿಕ್ಯಾನ್ಮಹಿಷಸಮರೇ ಪ್ರಚ್ಯುತಂ ಶುಕ್ಲಮುರ್ವ್ಯಾಂ ದೇವೇಶ್ಯಾ ಯದ್ಬಲಿಗೃಹಮಗಾತ್ತೇನ ಪಾತಾಲಗಂಗಾ । ಉದ್ಭೂತಾ ತತ್ಕಲಿತಬಿಲತಃ ಶುಕ್ಲತೀರ್ಥಂ ತದಾಹುಃ ಶುಕ್ರನ್ಯಸ್ತೋ ನಿಖಿಲವರದೋ ಯತ್ರ ಸಿದ್ಧೇಶ್ವರೋಽಸ್ತಿ ॥ ೩೨ ॥ ದೇವ್ಯಾಃ ಪುರಸ್ತಾತ್ಖಲು ವಹ್ನಿತೀರ್ಥಮಾಸ್ತೇ ವಸಿಷ್ಠಾದಿಮುನೀಂದ್ರಜುಷ್ಟಮ್ । ಈಶಾಂಶಗಂ ಭಾರ್ಗವತೀರ್ಥಮುಕ್ತಂ ಸುಪಾವನಂ ಭಾರ್ಗವರಾಮಕ್ಲೃಪ್ತಮ್ ॥ ೩೩ ॥ ಈಶಾದಿಕೋಣೇಷು ಚತುರ್ಷು ಸಂಸ್ಥಾಃ ಶ್ರೀವೀರಭದ್ರಶ್ಚ ಷಡಾನನಶ್ಚ । ಲಂಬೋದರೋ ಮಾರುತಿರಿತ್ಯಥಾನ್ಯೇ ದೇವಾಃ ಕಿಲಾಸ್ಮಿ-**

---

ಆ ಕುಟಜಾದ್ರಿಯಲ್ಲಿ ಹೊರಡತಕ್ಕ ಚತುಷ್ಷಷ್ಟಿ ತೀರ್ಥಗಳಿಂದ ಸಹಿತವಾದದ್ದಾಗಿಯೂ, ಕಲಿಯುಗದ ಜನರ ಪಾಪಗಳನ್ನು ನಾಶಮಾಡುವುದರಲ್ಲಿ ಮುಖ್ಯವಾದ ಸಾಮರ್ಥ್ಯವುಳ್ಳದ್ದಾಗಿಯೂ ಇರುವ ಸೌಪರ್ಣಿಕೆಯೆಂಬ ಮಹಾನದಿಯಿರುತ್ತದೆ. ಇದು ಜನರಿಗೆ ಸಕಲ ಫಲಗಳ ಸಿದ್ಧಿಯನ್ನು ಕೊಡುವುದಾಗಿಯೂ ಇದೆ. ಸುಪರ್ಣನೆಂಬ ಗರುಡನು ಇದರ ತೀರದಲ್ಲಿ ತಪಸ್ಸನ್ನು ಮಾಡಿ ದೇವಿಯ ದೆಸೆಯಿಂದ ತನ್ನ ಅಭೀಷ್ಟಗಳನ್ನು ಪಡೆದಿರುವುದರಿಂದ ಈ ನದಿಗೆ ಸೌಪರ್ಣಿಕಾ ಎಂಬ ನಾಮವುಂಟಾಗಿರುವುದು ॥ ೩೧ ॥ ಇಲ್ಲಿ ಮಹಿಷಾಸುರನ ಯುದ್ಧಸಮಯದಲ್ಲಿ ದೇವಿಗೆ ಮಧುಪಾನವು ಅತಿರೇಕವಾಗಿ ಶುಕ್ಲವು ಭೂಮಿಯಲ್ಲಿ ಸ್ರವಿಸಿ ರಂಧ್ರಮಾಡಿಕೊಂಡು ಬಲಿಗ್ರಹವೆಂಬ ಪಾತಾಳಕ್ಕೆ ಹೋಗಲು ಅಲ್ಲಿರುವ ಪಾತಾಳಗಂಗೆಯು ಅದೇ ರಂಧ್ರದಿಂದ ಮೇಲೆ ಬಂದಿರುವಳು. ಇದನ್ನು ಶುಕ್ಲತೀರ್ಥವೆಂದು ಹೇಳುವರು. ಈ ಶುಕ್ಲತೀರ್ಥದಡದಲ್ಲಿ ಶುಕ್ರಾಚಾರ್ಯನಿಂದ ಸ್ಥಾಪಿಸಲ್ಪಟ್ಟ ಸಿದ್ಧೇಶ್ವರನಿರುವನು. ಈ ಸ್ವಾಮಿಯು ಸರ್ವರಿಗೂ ವಿಶೇಷವಾಗಿ ವರಗಳನ್ನು ಕೊಡುವನು ॥ ೩೨ ॥ ದೇವಿಯ ಮುಂಗಡೆಯಲ್ಲಿ ವಸಿಷ್ಠಾದಿ ಮಹರ್ಷಿಗಳಿಂದ ಸೇವಿತವಾದ ವಹ್ನಿತೀರ್ಥವಿರುವುದು. ಈಶಾನಕೋಣದಲ್ಲಿ ಪರಶುರಾಮನಿಂದ ಕಲ್ಪಿಸಲ್ಪಟ್ಟ ಅತಿಪವಿತ್ರವಾದ ಭಾರ್ಗವತೀರ್ಥವೂ ಇರುತ್ತದೆ ॥ ೩೩ ॥ ಮತ್ತು ದೇವಿಯ ಈಶಾನಕೋಣದಲ್ಲಿ ವೀರಭದ್ರನೂ, ಆಗ್ನೇಯಕೋಣದಲ್ಲಿ ಸುಬ್ರಹ್ಮಣ್ಯನೂ,

**ನ್ಪಹವಃ ಸಮಂತಾತ್ ॥ ೩೪ ॥ ಗಂಧರ್ವಸಿದ್ಧೋರಗಕಿನ್ನರಾದ್ಯಾ ಗಾಯಂತಿ ಸಂಧ್ಯಾತ್ರಿತಯೇಽತಿಭಕ್ತ್ಯಾ । ವೇದೈಸ್ತ್ರಿಭಿರ್ನಿತ್ಯಮಿಹೇಹ ದೇವೀಂ ಸಚ್ಚಿತ್ಸ್ವರೂಪಾಂ ಕುಟಜಾದ್ರಿಸಂಸ್ಥಾಃ ॥ ೩೫ ॥ ಇತ್ಥಂ ಶ್ರುತಂ ಮದ್ಗುರುಮರ್ಯವಕ್ತ್ರಾನ್ಸ್ನಾಣಾಮಿಹಾಮುತ್ರ ಸುಖಪ್ರದಂ ಯತ್ । ಮಾಹಾತ್ಮ್ಯಮೇತಸ್ಯ ರಹಸ್ಯಭೂತಸ್ಯೋಕ್ತೋಽಧುನಾ ಸಂಗ್ರಹ ಏವ ವಿಪ್ರಾಃ ॥ ೩೬ ॥ ಏವಂ ಶ್ರದ್ಧಾಭಕ್ತಿಯುಕ್ತೋ ನರೋ ಯಃ ಕುರ್ಯಾದೇತತ್ ಕ್ಷೇತ್ರಯಾತ್ರಾಂ ಸ ಯಾತಿ । ದೇವೀ-ಲೋಕಂ ತಸ್ಯ ಪಿತ್ರಾದಯೋಽಪಿ ಪ್ರೀತಾಃ ಸಂತೋ ಬ್ರಹ್ಮಲೋಕೇ ವಸಂತಿ ॥ ೩೭ ॥ ತೀರ್ಥಸ್ನಾನಂ ದ್ರವ್ಯದಾನಂ ಸುರಾರ್ಚಾಂ ವಿದ್ವ-ದ್ಭುಕ್ತಿಂ ತತ್ಕಥಾಕರ್ಣನಂ ಚ । ಯೇ ವೈ ಚಕ್ರುಸ್ತೇ ಮಹಾಕ್ಷೇತ್ರ-**

---

ನಿರ್ಋತಿಕೋಣದಲ್ಲಿ ಗಣಪತಿಯೂ, ವಾಯುಕೋಣದಲ್ಲಿ ಮುಖ್ಯಪ್ರಾಣನೂ, ಇವರಲ್ಲದೆ ಅನೇಕ ಪರಿವಾರ ದೇವತೆಗಳು ಸುತ್ತಲೂ ಇರುವರು ॥ ೩೪ ॥ ಗಂಧರ್ವರೂ ಸಿದ್ಧರೂ ಉರಗರೂ ಕಿನ್ನರರೂ ಇವರೇ ಮೊದಲಾದವರು ಕುಟಜಾದ್ರಿಯಲ್ಲಿರುವವರಾಗಿ ನಿತ್ಯವೂ ಅತ್ಯಂತ ಭಕ್ತಿಯಿಂದ ಪ್ರಾತಃ ಮಧ್ಯಾಹ್ನ ಸಾಯಾಹ್ನಗಳೆಂಬ ಸಂಧ್ಯೆಗಳು ಮೂರರಲ್ಲಿಯೂ ಋಗ್ಯಜುಸ್ಸಾಮಗಳೆಂಬ ಮೂರುವೇದಗಳಿಂದ ಸಚ್ಚಿದಾನಂದ ಸ್ವರೂಪಿಯಾದ ಮಹಾಲಕ್ಷ್ಮಿಯನ್ನು ಹಾಡುವರು ॥ ೩೫ ॥ ಎಲೈ ಮುನಿಗಳಿರಾ! ಮನುಷ್ಯರಿಗೆ ಇಹ ಸುಖವನ್ನು ಕೊಡತಕ್ಕುದಾದ, ನನ್ನ ಗುರುನಾಥವ್ಯಾಸರ ಮುಖದ ದೆಸೆಯಿಂದ ಕೇಳಲ್ಪಟ್ಟ ಕೋಲಾಪುರಕ್ಷೇತ್ರಮಾಹಾತ್ಮ್ಯವಾವುದಿರುವುದೋ, ಆ ರಹಸ್ಯವಾದ ಮಾಹಾತ್ಮ್ಯದ ಸಂಕ್ಷೇಪವೇ ನನ್ನಿಂದ ಈ ಪ್ರಕಾರವಾಗಿ ಹೇಳಲ್ಪಟ್ಟಿತು (ಈ ಮಹಾತ್ಮ್ಯವು ಪುನಃ ಒಟ್ಟಿನಿಂದ ನೂರಿಪ್ಪತ್ತು ಅಧ್ಯಾಯಗಳಾಗಿ ಹೇಳಲ್ಪಟ್ಟಿದೆ) ॥ ೩೬ ॥ ಯಾವ ಮನುಷ್ಯನು ಈ ರೀತಿಯಿಂದ ಶ್ರದ್ಧಾಭಕ್ತಿಯುಕ್ತನಾಗಿ ಮಹಾಕ್ಷೇತ್ರದ ಯಾತ್ರೆಯನ್ನು ಮಾಡುತ್ತಾನೋ, ಅವನು ಮಣಿದ್ವೀಪವೆಂಬ ದೇವೀಲೋಕವನ್ನಯ್ದುವನು. ಅವನ ಪಿತೃಪಿತಾಮಹಾದಿಗಳು ಸಂತುಷ್ಟರಾಗಿ ಬ್ರಹ್ಮಲೋಕದಲ್ಲಿ ವಾಸಮಾಡುವರು ॥ ೩೭ ॥ ಯಾವ ಮನುಷ್ಯರು ಮಹಾಕ್ಷೇತ್ರವನ್ನಯ್ದಿ ತೀರ್ಥಸ್ನಾನವನ್ನೂ, ಪಿಂಡದಾನ ಅಥವಾ ಯಥಾಶಕ್ತಿ ಹಿರಣ್ಯಾದಿ ದಾನವನ್ನೂ, ದೇವತಾರಾಧನೆಯನ್ನೂ, ಬ್ರಾಹ್ಮಣ ಸಂತರ್ಪಣೆಯನ್ನೂ, ಆ ಕ್ಷೇತ್ರಮಾಹಾತ್ಮ್ಯದ ಶ್ರವಣವನ್ನೂ ಕೂಡ ಮಾಡುವರೋ, ಅವರೆ ಆ ಮಹಾಕ್ಷೇತ್ರದ ಯಾತ್ರೆಯನು

ಯಾತ್ರಾಂ ಚಕ್ರುರ್ನೋ ಚೇತ್ತೇ ಹಿ ನೋ ಚಕ್ರುರೇವ ॥ ೩೮ ॥
ಯೋ ವಾಲಸ್ಯಾನ್ಮೋಹತೋ ವಾಽನ್ಯತೋ ವಾ ಮರ್ತ್ಯಃ ಪ್ರಾಪ್ತಃ
ಸನ್ಮಹಾಕ್ಷೇತ್ರಮತ್ರ । ನೋ ಕುರ್ಯಾತ್ತದ್ದೇವತಾರಾಧನಾದ್ಯಂ
ದೇವದ್ರೋಹೀ ಸ್ಯಾತ್ಪಿತೃದ್ರೋಹವಾಂಶ್ಚ ॥ ೩೯ ॥ ಸಂಪೂಜ್ಯ ಸರ್ವ-
ಜನನೀಮತಿಭಕ್ತಿಯುಕ್ತೋ ಮಾಹಾತ್ಮ್ಯಮೇತದಮಲಂ ಗುರು-
ವರ್ಯವಕ್ತ್ರಾತ್ । ಶ್ರುತ್ವಾಽಥ ಪುಸ್ತಕಮಿದಂ ಪರಿಪೂಜ್ಯ ಶಕ್ತ್ಯಾ
ವಕ್ತಾರಮಂಶುಕಮುಖೈಃ ಪರಿತೋಷಯೇಚ್ಚ ॥ ೪೦ ॥ ಇದಂ
ಸಾರಭೂತಂ ಚರಿತ್ರಂ ಪವಿತ್ರಂ ಪುರಾಣಂ ಪಠತ್ಯೇಕಚೇತಾ ನರೋ
ಯಃ । ಶೃಣೋತ್ಯೇವ ವಾ ಭಾಗ್ಯಶಾಲೀ ಸ ಏತನ್ಮಹಾಕ್ಷೇತ್ರಯಾ-
ತ್ರಾಫಲಂ ಯಾತಿ ಸತ್ಯಮ್ ॥ ೪೧ ॥ ಪುನರೇತದಲಂ ಭವಾನ್ಯು-
ಪಾಂತೇ ಸಕೃದಪ್ಯಗ್ನಿಭುವೇ ಪುರಾರಿಣೋಕ್ತಮ್ । ಪ್ರಪಠನ್ಯದಿ
ಸರ್ವಪಾಪಮುಕ್ತಃ ಸ ಭವೇಚ್ಚಾಪಿ ಶಿವಾಕೃಪಾಸುಪಾತ್ರಮ್ ॥

---

ಮಾಡಿದವರೆಂದಾಗುವರು. ಆ ಐದನ್ನೂ ಮಾಡದಿದ್ದರೆ ಅವರು ಆ ಕ್ಷೇತ್ರಯಾತ್ರೆ
ಯನ್ನು ಮಾಡಲಿಲ್ಲವೆಂದೇ ಆಗುವರು ॥ ೩೮ ॥ ಯಾವನು ಈ ಪುಣ್ಯಭೂಮಿ
ಯಲ್ಲಿ ಮಹಾಕ್ಷೇತ್ರವನ್ನು ಪಡೆದವನಾಗಿ ಆಲಸ್ಯದಿಂದಾಗಲೀ, ಅಹಂಕಾರ
ದಿಂದಾಗಲೀ, ಬೇರೆರೀತಿಯಿಂದಾಗಲಿ, ಆ ದೇವರ ಆರಾಧನೆಮೊದಲಾದುವನ್ನು
ಮಾಡುವುದಿಲ್ಲವೋ, ಅವನು ದೇವತಾದ್ರೋಹಕರನೂ, ಪಿತೃದ್ರೋಹಕರನೂ,
ಆಗುವನು ॥ ೩೯ ॥ ಯಾತ್ರಾರ್ಥವಾಗಿ ಬಂದ ಮನುಷ್ಯನು ಸಕಲರಿಗೂ
ತಾಯಿಯಾದ ಶ್ರೀಮಹಾಲಕ್ಷ್ಮಿಯನ್ನು ಅತ್ಯಂತ ಭಕ್ತಿಯಿಂದ ಪೂಜಿಸಿ ತನ್ನ
ಪುರೋಹಿತನ ಮುಖದ್ದೆಸೆಯಿಂದ ಈ ಪವಿತ್ರವಾದ ಮಾಹಾತ್ಮ್ಯವನ್ನು ಕೇಳಿ
ಬಳಿಕ ಪುಸ್ತಕವನ್ನು ಪೂಜಿಸಿ ತನ್ನ ಶಕ್ತ್ಯನುಸಾರವಾಗಿ ವಸ್ತ್ರ ಸುವರ್ಣಾದಿ
ಗಳಿಂದ, ಹೇಳತಕ್ಕ ಪೌರಾಣಿಕನನ್ನು ಸಂತೋಷಿಸತಕ್ಕದ್ದು ॥ ೪೦ ॥ ಭಾಗ್ಯ
ಶಾಲಿಯಾದ ಯಾವ ಮನುಷ್ಯನು ಒಂದರಲ್ಲಿಯೇ ಮನಸುಳ್ಳವನಾಗಿ ಪವಿತ್ರ
ವಾದ ದೇವೀಚರಿತ್ರವೆಂಬೀ ಸಾರಭೂತವಾದ ಪುರಾಣವನ್ನೋದುವನೋ
ಅಥವಾ ಕೇಳುವನೋ, ಅವನು ಈ ಮಹಾಕ್ಷೇತ್ರದ ಯಾತ್ರೆಯ ಫಲವನ್ನು
ಸತ್ಯವಾಗಿ ಪಡೆಯುವನು ॥ ೪೧ ॥ ಮತ್ತು ಈಶ್ವರನು ಸ್ಕಂದನಿಗೆ ಹೇಳಿರುವ
ಈ ಮಾಹಾತ್ಮ್ಯವನ್ನೊಂದಾವರ್ತಿಯಾದರೂ, ದೇವೀಸನ್ನಿಧಿಯಲ್ಲಿ ಭಕ್ತಿ
ಯಿಂದ ಸಂಪೂರ್ಣವಾಗಿ ಪಾರಾಯಣ ಮಾಡುವವನು ಸಕಲ ಪಾಪಗಳಿಂದ
ಮುಕ್ತನಾಗಿ ದೇವಿಯ ಕೃಪಾರಸವು ನಿಲ್ಲುವುದಕ್ಕವನೊಂದು ಶ್ರೇಷ್ಠವಾದ

|| ೪೨ || ಅಧ್ಯಾಯತ್ರಿತಯಮಿದಂ ನಿತ್ಯಂ ಭಕ್ತ್ಯನ್ವಿತಸ್ತು ಯಃ ಪಠತಿ |
ಪ್ರತಿಶುಕ್ರವಾರಮಥವಾ ಸ ಸರ್ವಪೂಜ್ಯಂ ಪದಂ ಭಜತಿ || ೪೩ ||
ಪೀಯೂಷಾಂಭೋಧಿಮಧ್ಯೇ ಸಸುರತರುವನಃ ಸನ್ಮಣಿದ್ವೀಪ
ಉಕ್ತಸ್ತಸ್ಮಿನ್ನುತ್ತುಂಗಚಿಂತಾಮಣಿಭವನಮಿಹಾಜಾದಯಃ ಪಂಚ
ಮಂಚಃ | ತತ್ರ ಕ್ರೀಡಾರ್ಥಮಂಗೀಕೃತವಪುರಪಸವ್ಯಾತ್ಮಕಃ ಶ್ರೀ-
ಮಹೇಶಸ್ತದ್ವಾಮಾಂಕೇ ನಿಷಣ್ಣೇಽಖಿಲಜನನಿ ಮಹಾಲಕ್ಷ್ಮಿ ನಿತ್ಯಂ
ನಮಸ್ತೇ || ೪೪ ||

ಇತಿ ಸ್ಕಾಂದೇ ಶ್ರೀಕೋಲಾಪುರಕ್ಷೇತ್ರಮಾಹಾತ್ಮ್ಯೇ ಪರದೇವತಾಪ್ರಸಾದಸಾಧನವರ್ಣನಂ ನಾಮ ತೃತೀಯೋಽಧ್ಯಾಯಃ || ೩ ||

---

ಪಾತ್ರದಂತಾಗುವನು || ೪೨ || ಯಾವ ಮನುಷ್ಯನು ಭಕ್ತಿಸಹಿತನಾಗಿ ನಿತ್ಯವೂ ಅಥವಾ ಪ್ರತಿ ಶುಕ್ರವಾರವೂ, ಈ ಮಹಾತ್ಮ್ಯದ ಅಧ್ಯಾಯಗಳ ಮೂರನ್ನು ಪಾರಾಯಣ ಮಾಡುವನೊ ಅವನು ಈ ಲೋಕದಲ್ಲಿಯೂ, ಪರಲೋಕ ದಲ್ಲಿಯೂ, ಸಮಸ್ತ ಜನರಿಂದಲೂ ಪೂಜಿಸಲು ಯೋಗ್ಯವಾದ ಸ್ಥಾನವನ್ನು ಹೊಂದುವನು || ೪೩ || ಎಲೈ ಸಮಸ್ತ ಬ್ರಹ್ಮಾಂಡಗಳಿಗೂ ತಾಯಿಯಾದ ಮಹಾಲಕ್ಷ್ಮಿಯೆ! ವೈಕುಂಠಗೋಲೋಕಗಳಿಗೂ ಮೇಲಿರುವ ಅಮೃತಮಯ ಸಮುದ್ರದ ಮಧ್ಯದಲ್ಲಿ ಮಂದಾರ ಪಾರಿಜಾತ ಸಂತಾನ ಕಲ್ಪವೃಕ್ಷ ಹರಿ ಚಂದನಗಳೆಂಬ ದೇವವೃಕ್ಷಗಳ ವನಗಳಿಂದ ಕೂಡಿರುವ ಸರ್ವೋತ್ಕೃಷ್ಟವಾದ ಮಣಿದ್ವೀಪವೆಂಬುದಿರುವುದು. ಅದರಲ್ಲಿ ಅತ್ಯುನ್ನತವಾದ ಚಿಂತಾಮಣಿ ಗೃಹ ವೆಂಬ ಅರಮನೆಯಿದೆ. ಇದರಲ್ಲಿ ಬ್ರಹ್ಮ ವಿಷ್ಣು ರುದ್ರ ಈಶ್ವರರೇ ನಾಲ್ಕು ಕಾಲುಗಳಾಗಿಯೂ, ಸದಾಶಿವನೇ ಹಲಗೆಯಾಗಿಯೂ, ಉಳ್ಳದ್ದೊಂದು ಮಂಚವಿರುತ್ತದೆ. ಆ ಬ್ರಹ್ಮಾದಿ ಪಂಚದೇವತಾತ್ಮಕವಾದ ಮಂಚದಲ್ಲಿ, ಸೃಷ್ಟ್ಯಾದಿಯಲ್ಲಿ ಚಿಚ್ಚಕ್ರರೂಪಿಣಿಯಾದ ನೀನು ವಿನೋದಾರ್ಥವಾಗಿ ಧರಿ ಸಿರುವ ದಿವ್ಯದೇಹದ ದಕ್ಷಿಣಾರ್ಧ ಸ್ವರೂಪನಾದ ಪರಮಶಿವನೆಂಬ ಮಹೇಶನು ಕುಳಿತಿರುವನು. ಅವನ ಎಡದ ತೊಡೆಯಲ್ಲಿ ನೀನು ಅತ್ಯುತ್ಕೃಷ್ಟಯುವತಿ ರೂಪಿಣಿಯಾಗಿ ಕುಳಿತಿರುತ್ತೀಯೇ. ಇಂಥಾ ಸರ್ವೋತ್ತಮೆಯಾಗಿರುವ ನಿನ ಗೋಸ್ಕರ ಸರ್ವದಾ ನಮಸ್ಕಾರ || ೪೪ ||

ಎಂಬಲ್ಲಿಗೆ ಸ್ಕಾಂದಪುರಾಣಾಂತರ್ಗತಶ್ರೀಕೋಲಾಪುರಕ್ಷೇತ್ರಮಾಹಾತ್ಮ್ಯದಲ್ಲಿ
ಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಮೂಕಾಂಬಿಕಾಯೈ ನಮಃ ॥

# ಮಂತ್ರೋದ್ಧಾರಸ್ತೋತ್ರಮ್

ಓಮಿತ್ಯಕ್ಷರರೂಪಿಣೀಂ ಪರಕಲಾಂ ಸದ್ಬಿಂದುನಾದೋದಯಾಂ
ಸೂರ್ಯೇಂದ್ವಗ್ನಿಮಯೈಕಪೀಠಸದನಾಂ ಸೌಷುಮ್ನಸದ್ವರ್ತಿನೀಮ್ ।
ಆಧಾರಾಶ್ರಯಸತ್ಕಲಾಮೃತರಸಾಂ ನಿತ್ಯಂ ವಹಂತೀಂ ಪರಾಂ
ನಿತ್ಯಂ ಶ್ರೀತ್ರಿಪುರಾಸುಧಾರಸಮಯೀಂ ವಂದೇ ಸದಾ ಸುಂದರೀಮ್ ॥ ೧ ॥

ಕಲ್ಯಾಣೀಂ ಕಮಲೇಕ್ಷಣಾಂ ಕಮಲಿನೀಂ ಕಾತ್ಯಾಯನೀಂ ಕಾಮಿನೀಂ
ಕಲ್ಯಾಣಪ್ರತಿದಾಯಿನೀಂ ಸಕರುಣಾಂ ಜ್ಞಾನಪ್ರಕಾಶಪ್ರದಾಮ್ ।
ಕರ್ಪೂರಸ್ಥಿರಬಿಂದುಕುಂದಕುಸುಮಪ್ರದ್ಯೋತಿನೀಂ ದ್ಯೋತಿನೀಂ
ಕಲ್ಯಾಣಾಯ ಕಲಾವತೀಂ ಸುವಿಮಲಾಂ ವಂದೇ........ ॥ ೨ ॥

ಏನಸ್ತ್ವಂ ತವಹಾರಿಣೀಮಘಹರಾಮೇಕಾಮನೇಕಾತ್ಮಿಕಾ-
ಮೇಣಪ್ರಾಪಿತಲೋಲಲೋಚನಕರಾಂ ಶುಭ್ರಾಂ ಸುಶುಭ್ರಾಂಬರಾಮ್ ।
ಏಕಾತ್ಮಪ್ರತಿಚಿತ್ರಿತಾಂ ಸುಖಕರೀಂ ಆನಂದಸಂದಾಯಿನೀ-
ಮೇಕಾರಾಕ್ಷರರೂಪಿಣೀಮನುಪಮಾಂ ವಂದೇ........ ॥ ೩ ॥

ಈಶಾನಾಂಗವಿದಾರಿತಾರ್ಧಸತನೂಮೀಂಕಾರರೂಪಾತ್ಮಿಕಾ-
ಮೀಷತ್ಪ್ರೋದಿತವಲ್ಲಸೀಮನುಭವಪ್ರಾಕಾಶಿನೀಂ ನಿರ್ಮಲಾಮ್ ।
ಈಷದ್ಧಾಸಸುನಾಸಚಾರುಸುಮುಖೀಂ ಶ್ವೇತಾರವಿಂದಸ್ತನೀ-
ಮೀಶಾನೀಂ ಪರಮಾಂ ಪರಾತ್ಪರತರಾಂ ವಂದೇ........ ॥ ೪ ॥

ಲಕ್ಷ್ಮೀಹಾಸತಿಭಕ್ತಿನಮ್ರಶಿರಸಾಂ ಪುಷ್ಟಿಂ ಸುಪುಣ್ಯಾಂ ಜನಾಃ
ಪೂಜಾಧ್ಯಾನಪರಾಯಣಾಂ ತ್ರಿನಯನಾಂ ಲಕ್ಷ್ಮೀಸ್ವರೂಪಾಂ ಪರಾಮ್ ।
ಲಾವಣ್ಯಾಂಬುಲಸತ್ಕರೇವರದರಾಂ ಶುಭ್ರಾಂ ಸುಪುಷ್ಪಾಂಬರಾಂ
ಲಕ್ಷ್ಮೀಲಕ್ಷಣಸಂಯುತಾಂ ಸುಲಲಿತಾಂ ವಂದೇ........ ॥ ೫ ॥

ಹ್ರೀಂಕಾರೀಂ ಸಿತಖಂಡಚಂದನಯುತಾಂ ಧೀರೂಪಿಣೀಂ ಧೀಪ್ರದಾಂ
ಹ್ರೀಂರೂಪಾಂ ಧವಲೋಪಚಾರರಚನಾಂ ಶ್ವೇತಾಕ್ಷಸೂತ್ರಾವಲೀಮ್ ।
ಮುಕ್ತಾಹಾರಸುಶೋಭಿತಾಂ ವಿದಧತೀಂ ವಾಮೇ ಕರೇ ಪುಸ್ತಕಂ
ವಿದ್ಯುತ್ಪುಂಜಸಮಾನಚಾರುರುಚಿರಾಂ ವಂದೇ........ ॥ ೬ ॥

ಹಾರಂ ಹಾರಮನೋಜಗತ್ತ್ರಯಮಿದಂ ನಿರ್ಮಾಸಿ ಹರ್ಷಾತ್ಮಿಕೇ
ಹೇ ದೇವಿ ತ್ರಿಪುರೇ ತ್ವಮೇವ ಶರಣಂ ಹೇ ವ್ಯಾಪಿನೀ ಹೇಲಯಾ ।
ಹಾರಾದ್ಯಾಭರಣೋಜ್ಜ್ವಲಾಂ ಧೃತಮತೀಂ ಹೇಲಾರಸೋಲ್ಲಾಸಿನೀಂ
ಹರ್ಷೋನ್ಮತ್ತಕಲೇಬರಾಂ ಸುವಿಮಲಾಂ ವಂದೇ........ ॥ ೭ ॥

ಸಂಸಾರಸ್ಥಿತಿಸೃಷ್ಟಿಸಂಲಯಕರೀಂ ಸಂಸಾರಸಾರೋಪಮಾಂ
ಸಂಸಾರಾರ್ಣವಮೋಹಭಾವತರಣಿಂ ಸರ್ವಾದಿಭೂತೋದಯಾಮ್ ।
ಸರ್ವಕ್ಲೇಶಹರಾಂ ಸಕಾರಸತನೂಂ ಸರ್ವಾತ್ಮಿಕಾಂ ಸರ್ವಗಾಂ
ಸರ್ವಾಹ್ಲಾದನಕಾರಿಣೀಮನುಪಮಾಂ ವಂದೇ........ ॥ ೮ ॥

ಕಾಮಾಕ್ಷೀಂ ಕಲಿಕಲ್ಮಷೌಘಹರಣೀಂ ಕಲ್ಯಾಣವೃದ್ಧಿಪ್ರದಾಂ
ಕಂದರ್ಪಪ್ರತಿಬದ್ಧಲಾಲಸತನೂಂ ಸಂಬಿಭ್ರತೀಂ ಸುಂದರೀಮ್ ।
ಕಾಮಾಕಾರಕಲೇಬರಾಂ ಸುವಿಮಲಾಂ ಸದ್ಭಕ್ತಪಾದಾಂಬುಜಾಂ
ಕಾಂಚೀಯುಕ್ತನಿತಂಬಿನೀಮನುಪಮಾಂ ವಂದೇ........ ॥ ೯ ॥

ಹೇಮಾಭಾಂ ಹಿಮರಾಜಶೈಲತನಯಾಂ ಹರ್ಷಾತ್ಮಿಕಾಮಂಬಿಕಾಂ
ಹಂಸಾಖ್ಯಾಂ ಮುನಿಚಿತ್ತಹಂಸಸದೃಶೀಂ ಹಂಸಾಸನೋಪಸ್ಥಿತಾಮ್ ।
ಹಂಸೇಂದೂಹರಿವಾಹನಾಂ ಹರಮನೋಹಾರಾಂ ಹಕಾರಾತ್ಮಿಕಾಂ
ಹೇಲಾವಂದಿತವೈರಿಸಂಚಿತಪದಾಂ ವಂದೇ........ ॥ ೧೦ ॥

ಲೀಲಾಲಾಸಕಲಾವಿಲಾಸಕುಶಲಾಮುಂಚಚ್ಚಲಾಲೋಕಿನೀಂ
ಲೀಲಾಲೋಹಿತಲೋಹಕಾಮಮನಸಾಂ ಲೋಕೇಷ್ಟಗಮ್ಯಪ್ರಭಾಮ್ ।
ಲೀಲಾ(ಲೋಲಾ)ಲೋಲಧಿಯಾ ತು ಲೋಲಮನಸಾಂ ಪುಂಸಾಮಲೋ-
ಕಾತ್ಮಿಕಾಂ
ಲೀಲಾಕ್ಷೀಂ ಪ್ರತಿನಂದಿನೀಂ ತ್ರಿನಯನಾಂ ವಂದೇ........ ॥ ೧೧ ॥

ಹ್ರೀಂಕಾರಾದಿನಿವಾಸಿನೀಂ ಸುಹೃದಯಾಂ ಹ್ರೀಂಕಾರನಾಮ್ನೀಂ ಸತೀಂ
ನಾನಾಮಂತ್ರಮಯೀಂ ತ್ರಯೀಂ ತನುಮಯೀಂ ಸದ್ವ್ಯಾಪಿನೀಂ
ಯಾಮಿನೀಮ್ ।
ಮಾರ್ತಂಡಾನಲಚಂದ್ರಸಂತ್ರಿನಯನಾಂ ಸನ್ಮಾನಿನೀಂ ಮಾನಿನೀಂ
ನಾನಾಕರ್ಮಮಯಾತ್ಮಿಕಾಮನುಪಮಾಂ ವಂದೇ........ ॥ ೧೨ ॥

ಸರ್ವಜ್ಞಾನಸುದೇವತಾಂ ಸಮುದಯಾಂ ಸರ್ವಾರ್ಥಸಂದರ್ಶಿನೀಂ
ಶರ್ವಾಣೀಂ ಸದಯಾಂ ಸದಾಶಿವಮನಸ್ಸಂದಾಯಿನೀಂ ಶಾಂಕರೀಮ್ ।

ಸರ್ವೇಷಾಂ ಸಕಲೋಪಚಾರರಸಿಕಾಂ ಸರ್ವಾರ್ಥಸಿದ್ಧಿಪ್ರದಾಂ
ಸಾನಂದಾಂ ಸುರವೃಂದವಂದಿತಪದಾಂ ವಂದೇ........ ॥ ೧೩ ॥

ಕಾದಿಕ್ಷಾಂತಮನಂತರೂಪಧರಣೀಂ ಕಾಮೇಶ್ವರೀಂ ಕಾಮದಾಂ
ಕಾಸತ್ಕಾಂತಿಸುಹಸ್ತಸಂಚಿತಕರೀಂ ಕಾಮೈಕಕಾರಾತ್ಮಿಕಾಮ್ ।
ಕಾಶ್ಮೀರಾಗರುಕೌಸ್ತುಭಾನ್ವಿತತನೂಂ ಕಂದರ್ಪದರ್ಪೋಜ್ಜ್ವಲಾಂ
ಕಾಮೋನ್ಮತ್ತಕಲೇಬರಾಂ ಸುವಿಮಲಾಂ ವಂದೇ........ ॥ ೧೪ ॥

ಲಾಕ್ಷಾರಂಜಿತಪಾದಪದ್ಮಯುಗಲಾಂ ವಿಷ್ಣ್ವೀಶಸಂಸೇವಿತಾಂ
ಲೋಹಿತ್ಸಂಜಿತಫುಲ್ಲದಾಡಿಮನಿಭಾಂ ಬಂಧೂಕಸಿಂಧೂರಭಾಮ್ ।
ಲೌಹಿತ್ಯಾಂಶುಕಸಂವೃತಾಂ ಸುಲಲಿತಾಂ ನಿರ್ಲಕ್ಷಿತಾಪಾಂಶುಲೈ-
ರ್ಲಾಕ್ಷಾನಿರ್ಮಲಪುಣ್ಯಯುಕ್ತವಪುಷಾಂ ವಂದೇ........ ॥ ೧೫ ॥

ಹ್ರೀಂಕಾರಾದಿಸಮಸ್ತಮಂತ್ರಸಹಿತಾಂ ಹೃತ್ಪದ್ಮಮಧ್ಯಸ್ಥಿತಾಂ
ಶ್ರೀಕಂಠಾಂ ಹೃದಯಸ್ಥಗಾಢತಿಮಿರಪ್ರಧ್ವಂಸಹಂಸಾತ್ಮಿಕಾಮ್ ।
ಸರ್ವಾಂತರ್ಗತಹಂಸಮಾನಸದೃಶೀಂ ಹ್ರೀಂಕಾರವೇಷೋಜ್ಜ್ವಲಾಂ
ಕಾಮೋನ್ಮತ್ತಕಲೇಬರಾಮನುಪಮಾಂ ವಂದೇ ಸದಾ ಸುಂದರೀಮ್ ॥೧೬॥

**ಇತಿ ಶ್ರೀಮಚ್ಛಂಕರಾಚಾರ್ಯಕೃತಮಂತ್ರೋದ್ಧಾರಸ್ತೋತ್ರಂ ಸಂಪೂರ್ಣಮ್**

ಶ್ರೀಮೂಕಾಂಬಿಕಾರ್ಪಣಮಸ್ತು